ತಿರುಪತಿಯಲ್ಲಿ ಪದ್ಮಸರೋವರದ ದಡದಲ್ಲಿ ನಡೆಯುವ ಸಭೆಯಲ್ಲಿ ಶ್ರೀಸತ್ಯಧ್ಯಾನತೀರ್ಥರು ಎತ್ತರ ಸ್ಥಾನದಲ್ಲಿ ವಿರಾಜಮಾನರಾಗಿದ್ದಾಗ, ಅವರ ಸುತ್ತ ಪಂಡಿತ ಮಂಡಲಿಯು ನೆಲೆಸಿದ್ದಾಗ, ಅನೇಕ ಸ್ಥಳಗಳಲ್ಲಿ ವಾಸಿಸುವ ಪ್ರೇಕ್ಷಕ ಜನರು ಅಲ್ಲಿ ಸೇರಿದ್ದಾಗ, ಒಬ್ಬ ವಿದ್ಯಾರ್ಥಿಯು ದಿನಕರೀ ಗ್ರಂಥದ ಪರೀಕ್ಷಾರ್ಥಿಯಾಗಿ ಈ ಯತಿವರ್ಯರನ್ನು ನಮಸ್ಕರಿಸಿದನು.

ಸಾಮಾನ್ಯಬಾಧೇ ವಿಬುಧೋಥ
ಕಶ್ಚಿದ್ವಿದ್ಯಾರ್ಥಿನಂ ಪ್ರಶ್ನಗಣಾನಪೃಚ್ಛತ್ ॥
ತದುತ್ತರೇಣಾಥ ಸ ತೃಪ್ತಿಹೀನಃ
ಪ್ರಶ್ನೈಸ್ತಮಸ್ತಂಭತ ದುರ್ನಿವಾರ್ಯೈಃ ॥ ೮೦ ॥

ಆಗ ಒಬ್ಬ ಪಂಡಿತರು ಆ ವಿದ್ಯಾರ್ಥಿಗೆ ಜಾತಿಬಾಧವಿಷಯದಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿದರು. ಆ ವಿದ್ಯಾರ್ಥಿಯು ನೀಡಿದ ಉತ್ತರದಿಂದ ಅವರು ತೃಪ್ತರಾಗದವರಾಗಿ ಪರಿಹರಿಸಲಾಗದ ಕೆಲವು ಪ್ರಶ್ನೆಗಳಿಂದ ಅವನನ್ನು ಸ್ತಂಭನೆಗೊಳಿಸಿದರು.

ತಂ ಸ್ತಂಭಮಾನಂ ವಿಬುಧಂ ಯತೀಂದ್ರ -
ಶ್ಚರ್ಚಾನಲ ಪ್ರಜ್ವಲನಾಯ ಪಶ್ಚಾತ್ ॥
ಪಪ್ರಚ್ಛ ಸಾಂಕರ್ಯಸುಲಾಂಛನಂ ಕಿಂ
ಬಾಧತ್ವಮಾಸ್ತೇಽಸ್ಯ ಕಥಂ ವದೇತ್ಥಮ್ ॥ ೮೧ ॥

ಹೀಗೆ ಆ ವಿದ್ಯಾರ್ಥಿಯನ್ನು ಸ್ತಂಭನೆಗೊಳಿಸುತ್ತಿರುವ ಆ ಪಂಡಿತರನ್ನು ಯತಿಶ್ರೇಷ್ಠರಾದ ಶ್ರೀ ಸತ್ಯಧ್ಯಾನತೀರ್ಥರು ಚರ್ಚೆಯೆಂಬ ಬೆಂಕಿಯನ್ನು ಉಜ್ವಲಗೊಳಿಸಲು ಆನಂತರದಲ್ಲಿ ಸಾಂಕರ್ಯ ಲಕ್ಷಣವು ಏನೆಂದು ಹಾಗೂ ಅದು ಹೇಗೆ ಜಾತಿಬಾಧಕವೆಂದು ಹೇಳಿರೆಂದು ಕೇಳಿದರು.

ನಿರುತ್ತರೇಽಸ್ಮಿನ್ ವಿಬುಧೇ ಸ್ವಪೃಷ್ಟೇ ಪ್ರೇಷ್ಠಂ ಪಟುಂ ಸಾತ್ವಿಕಪುತ್ರಮೇಷಃ ॥
ಆಹ್ವಾಯಯನ್ನಾಶು ಸುಹಾಸಹಂಸಃ ತದುತ್ತರಂ ವಕ್ತುಮಮುಂ ದಿದೇಶ ॥ ೮೨ ॥

ತನ್ನಿಂದ ಕೇಳಲ್ಪಟ್ಟ ಆ ಪಂಡಿತರು ಉತ್ತರಿಸಲು ಅಸಮರ್ಥರಾದಾಗ ಶ್ರೀಸತ್ಯಧ್ಯಾನತೀರ್ಥರು ತಮಗೆ ಅತಿಪ್ರಿಯನಾದ ಚತುರನಾದ, ಸಾತ್ವಿಕಾಚಾರ್ಯರ, ಪುತ್ರನನ್ನು ಕರೆಸಿ, ಮಂದಹಾಸವುಳ್ಳವರಾಗಿ ಆ ಪ್ರಶ್ನೆಗಳಿಗೆ ಉತ್ತರಿಸಲು ಆದೇಶಿಸಿದರು.

ಕರ್ಮಂದೀಶನಿದೇಶಭೀಷ್ಮಜನನೀಪೂತಾಂತರೋಂತೇವಸನ್
ವೈಶಿಷ್ಟ್ಯಾದಿಪರಿಷ್ಕೃತಾತಿಕಠಿಣಂ ಸಾಂಕರ್ಯಲಕ್ಷ್ಮಾದಿಕಮ್ ॥
ಮಂಜೂಷಾಪ್ರತಿಮಪ್ರಭಾದಿಗದಿತಂ ವಾಕ್ಯಾರ್ಥಜಾತಂ ವದನ್
ಪ್ರಶ್ನಾನಾಂ ದದದುತ್ತರಂ ಗುರುವರಂ ಸಂಪೂರ್ಣಮಪ್ರೀಣಯತ್ ॥ ೮೩ ॥

ಯತಿವರ್ಯರಾದ ಶ್ರೀ ಸತ್ಯಧ್ಯಾನತೀರ್ಥರ ಆದೇಶವೆಂಬ ಗಂಗೆಯಿಂದ ಪವಿತ್ರವಾದ ಮನಸ್ಸುಳ್ಳ ಆ ಶಿಷ್ಯನು ವೈಶಿಷ್ಟ್ಯಾನುಗಮಾದಿಗಳಿಂದ ಪರಿಷ್ಕರಿಸಲ್ಪಟ್ಟ "ಮಂಜೂಷಾ" "ಪ್ರಭಾ" ಮುಂತಾದ ಗ್ರಂಥಗಳಲ್ಲಿ ವರ್ಣಿತವಾದ ಸಾಂಕರ್ಯದ ಲಕ್ಷಣವೇ ಮೊದಲಾದ ಎಲ್ಲ ವಾಕ್ಯಾರ್ಥವನ್ನು ಅನುವಾದ ಮಾಡಿ, ಪ್ರಶ್ನೆಗಳಿಗೆ ಉತ್ತರ ನೀಡುತ್ತ, ಗುರುವರ್ಯರಾದ ಶ್ರೀಸತ್ಯಧ್ಯಾನತೀರ್ಥರನ್ನು ಸಂಪೂರ್ಣವಾಗಿ ಸಂತೋಷಗೊಳಿಸಿದನು.

ವೇದಾಂತಮಾತ್ರಚತುರೋ ಯತಿವರ್ಯ ಇತ್ಥಂ
ವಿದ್ವದ್ವರಭ್ರಮತಮಶ್ಚ ವಿನಾಶಮಾಶು ॥
ಪ್ರಾಪಾಖಿಲಾವಿದಿತ ಚಿತ್ರಪರಿಷ್ಕರೇಣ
ಮೌನೀಶಶಿಷ್ಯವರಭಾಸ್ಕರಗೋಗಣೇನ ॥ ೮೪ ॥

ಯತಿಶ್ರೇಷ್ಠರಾದ ಶ್ರೀಸತ್ಯಧ್ಯಾನತೀರ್ಥರು ವೇದಾಂತಮಾತ್ರದಲ್ಲಿ ಚತುರರಿರುವರೆಂಬ ದೊಡ್ಡ ಪಂಡಿತರ ಭ್ರಮೆಯೆಂಬ ಕತ್ತಲೆಯು, ಎಲ್ಲರೂ ತಿಳಿಯಲಾಗದ ಆಶ್ಚರ್ಯಕರವಾದ ಪರಿಷ್ಕಾರಗಳುಳ್ಳ, ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯಶ್ರೇಷ್ಠರಾದ ಶ್ರೀನಿವಾಸಾಚಾರ್ಯರೆಂಬ ಸೂರ್ಯನ ವಾಕ್ಯಗಳೆಂಬ ಕಿರಣಗಳ ಸಮೂಹದಿಂದ ನಾಶ ಹೊಂದಿತು.

ತತಶ್ಚ ನಿತ್ಯಂ ಪುರತೋ ನಿಧಾಯ ಯಂ
ಸಭಾಸು ವಾಕ್ಯಾರ್ಥಮಯಂ ಯತೀಶ್ವರಃ ॥
ವಿಧಾಪಯನ್ ಯೇನ ಕುವಾದಿನೋಽಪ್ಯಹನ್
ತದಸ್ಯ ಭಾಗ್ಯೋದಯಮತ್ರ ವಕ್ತಿ ಕಃ ॥ ೮೫ ॥

ಅಂದಿನಿಂದ ನಿತ್ಯವೂ ಯತಿಶ್ರೇಷ್ಠರಾದ ಶ್ರೀಸತ್ಯಧ್ಯಾನತೀರ್ಥರು ಸಭೆಗಳಲ್ಲಿ ಯಾರನ್ನು ಮುಂದಕ್ಕೆ ಇಟ್ಟು, ಯಾರಿಂದ ವಾಕ್ಯಾರ್ಥವನ್ನು ಮಾಡಿಸುತ್ತ ದುರ್ವಾದಿಗಳನ್ನು ನಿರಾಕರಿಸುತ್ತಿದ್ದರೋ. ಅಂಥ ಈ ಶ್ರೀನಿವಾಸಾಚಾರ್ಯರ ಭಾಗ್ಯೋದಯವನ್ನು ಇಲ್ಲಿ ಯಾರು ವರ್ಣಿಸಿಯಾರು?

ಮಠೇಽಥ ಕೃಷ್ಣಾಭಿಧಪಾಂಡುರಂಗೀ -
ವಿಪ್ರಪ್ರಬರ್ಹಸ್ಯ ಪದಾಬ್ಜಸಂಗೀ ॥
ವಿದ್ಯಾಸುಧಾಸೇವನಭೃಂಗಭಂಗಿ -
ರ್ಬಭಾವಯಂ ವ್ಯಾಪ್ತಯಶಸ್ತರಂಗೀ ॥ ೮೬ ॥

ಅನಂತರ ಮಠದಲ್ಲಿ ಪಾಂಡುರಂಗೀ ಕೃಷ್ಣಾಚಾರ್ಯರೆಂಬ ವಿಪ್ರಶ್ರೇಷ್ಠರ ಪದಪದ್ಮಗಳನ್ನು ಆಶ್ರಯಿಸಿ ವಿದ್ಯೆಯೆಂಬ ಮಧುವನ್ನು ಸೇವಿಸುವಲ್ಲಿ ಭೃಂಗದಂತೆ ಭಂಗಿಯುಳ್ಳ ಈ ಶ್ರೀನಿವಾಸಾಚಾರ್ಯರು ವಿಸ್ತಾರವಾದ ಯಶಸ್ಸಿನ ಅಲೆಯುಳ್ಳವರಾಗಿ ಶೋಭಿಸಿದರು.

ಸ್ವಪ್ರೌಢವರ್ಗೇಽಥ ವಯಸ್ಯವರ್ಗೇ
ಮನೀಷಯಾ ಸ್ವಾತಿಶಯಂ ಪ್ರದರ್ಶ್ಯ ॥
ಚರ್ಚಾವಿಹಾರಾದಿಷು ಸರ್ವಜೇತ್ರೇ
ಸರ್ವೋತ್ತರಂ ಸರ್ವವಿದುಕ್ತಿಮಾತ್ರಮ್ ॥ ೮೭ ॥

ತನಗಿಂತ ಪ್ರೌಢರಾದ ವಿದ್ಯಾರ್ಥಿಗಳ ಗುಂಪಿನಲ್ಲಿ ಹಾಗೆಯೇ ಗೆಳೆಯರ ಗುಂಪಿನಲ್ಲೂ ಬುದ್ಧಿಯಿಂದ ತನ್ನ ಹಿರಿಮೆಯನ್ನು ತೋರಿಸಿ ಚರ್ಚೆ ವಿಹಾರ (ಆಟಗಳು) ಇತ್ಯಾದಿಗಳಲ್ಲಿ ಸರ್ವರನ್ನು ಜಯಿಸುತ್ತಿದ್ದ ಈ ಶ್ರೀನಿವಾಸಾಚಾರ್ಯರಿಗೆ ' ಸರ್ವಜ್ಞ ' ( ಎಲ್ಲದರಲ್ಲೂ ಬಾಳ ಶಾಣ್ಯಾ) ಎಂಬ ಮಾತೊಂದೇ ಎಲ್ಲರ ಉತ್ತರವಾಗಿತ್ತು.

ಹ್ರೀಹೀನತೀಕ್ಷ್ಣವಚನಾತಪತೋಽಸ್ಯ ತೀವ್ರಂ
ಶುಷ್ಕಾರ್ದ್ರನಾಭಹೃದಿ ಮತ್ಸರವಹ್ನಿಭಾಜಾಮ್ ॥
ದುರ್ಮಾನಿನಾಮಿಹ ಗಿರಾ ಗುರುಮಪ್ರಸನ್ನಂ
ವಿಕ್ಷ್ಯೇವ ಪಂಢರಪುರಮೇಷ ನಮನ್ ಜಗಾಮ ॥ ೮೮ ॥

ಆ ಶ್ರೀನಿವಾಸಾಚಾರ್ಯರ ನಿರ್ಭಿಡೆಯ ಕಠೋರವಾದ ಮಾತುಗಳೆಂಬ ಬಿಸಿಲಿನಿಂದ ಮಠದಲ್ಲಿಯ ಜನರ ಮನಸ್ಸುಗಳು ಒಣಗಿದ ಎಲೆಗಳಂತಾಗಿದ್ದವು. ಅಲ್ಲಿ ಮಾತ್ಸರ್ಯವೆಂಬ ಬೆಂಕಿಯು ಉರಿಯುತ್ತಿತ್ತು. ಇಂಥ ಈ ದುರಾಗ್ರಹಿಗಳ ಒಳಸಂಚಿನ ಮಾತಿನಿಂದ ಗುರುಗಳನ್ನು ಅಪ್ರಸನ್ನರಾದಂತೆ ನೋಡಿ ಈ ಶ್ರೀನಿವಾಸಾಚಾರ್ಯರು ಕೂಡಲೆ ಗುರುಗಳಿಗೆ ವಂದಿಸಿ ಪಂಢರಪುರಕ್ಕೆ ಹೊರಟರು.

ವಿದ್ಯಾರಣ್ಯಗತೌ ಕುವಾದಿಕರಿಸಂಹಾರೇ ಚ ಪಂಚಾನನಂ
ಧ್ಯಾನಾರ್ಯಾಮಲಹಂಸಶಿಷ್ಯಸರಣಾವೇಕೋನಪಂಚಾನನಮ್ ॥
ಕೀರ್ತಿವ್ಯಾಪ್ತಮಹೀತಲಂ ಶ್ರಿತಸತಾಂ ವಿದ್ಯಾಸುಧಾದಾಯಿನಂ
ವಿಶ್ವೇಡ್ಯಂ ವರಖೇಡ್ಯುಪಾಹ್ವನೃಹರಿಂ ಶಿಶ್ರಾಯ ಬಾಲೋ ಹರಿಃ ॥ ೮೯ ॥

ಅನಂತರ, ವಿದ್ಯೆಯೆಂಬ ಅರಣ್ಯದಲ್ಲಿ ಸಂಚಾರ ಮಾಡುವುದರಲ್ಲಿ ಹಾಗೂ ದುರ್ವಾದಿಗಳೆಂಬ ಆನೆಗಳನ್ನು ಸಂಹಾರಮಾಡುವುದರಲ್ಲಿ ಪಂಚಾನನ (ಸಿಂಹ)ದಂತಿರುವ, ಶ್ರೀ ಸತ್ಯಧ್ಯಾನತೀರ್ಥರೆಂಬ ನಿರ್ಮಲ ಹಂಸರೂಪಿ ಪರಮಾತ್ಮನ ಶಿಷ್ಯರಲ್ಲಿ ಚತುರ್ಮುಖನಂತಿರುವ, ಯಶಸ್ಸಿನಿಂದ ಭೂಮಂಡಲವನ್ನು ವ್ಯಾಪಿಸುವ, ಆಶ್ರಿತ ಸಜ್ಜನರಿಗೆ ವಿದ್ಯಾಮೃತನೀಡುವ, ಜಗನ್ಮಾನ್ಯರಾದ ವರಖೇಡಿ ಎಂಬ ಉಪನಾಮ (ಅಡ್ಡ ಹೆಸರು)ವುಳ್ಳ ಶ್ರೀ ನರಸಿಂಹಾಚಾರ್ಯರನ್ನು ಈ ಶ್ರೀನಿವಾಸಾಚಾರ್ಯರೆಂಬ ಬಾಲಸಿಂಹವು ಆಶ್ರಯಿಸಿತು.

ಪ್ರತಿಭಾಪ್ರಭಾಪ್ರಸರಣೇನ ಸಸ್ಮಿತಂ
ನರಸಿಂಹವರ್ಯವದನಾಂಬುಜಂ ನಯನ್ ॥
ಹರಿಗುರ್ವನುಗ್ರಹಸಮಗ್ರವಿಗ್ರಹೋ
ಸಮಯೇನ ತರ್ಕಸಮಯೇಽಸಮೋ ಬಭೌ ॥ ೯೦ ॥

ಆನಂತರ ಪ್ರತಿಭೆಯೆಂಬ ಪ್ರಭೆಯ ಪ್ರಸಾರದಿಂದ ಶ್ರೀನರಸಿಂಹ ಆಚಾರ್ಯರ ಮುಖಕಮಲವನ್ನು ಅರಳಿಸುತ್ತಾ, ಹರಿಗುರುಗಳ ಅನುಗ್ರಹವನ್ನೇ ಸಂಪೂರ್ಣ ಶರೀರವನ್ನಾಗಿ ಹೊಂದಿದ ಆ ಶ್ರೀನಿವಾಸಾಚಾರ್ಯರು ಸ್ವಲ್ಪಕಾಲದಲ್ಲಿಯೇ ತರ್ಕಶಾಸ್ತ್ರದಲ್ಲಿ ಅಸದೃಶರೆನಿಸಿದರು.

ನರಸಿಂಹಗಹ್ವರತ ಆಗತೋ ಬಹಿ -
ರ್ನವಸಿಂಹರಾಡಥ ಪರೀಕ್ಷಣಕ್ಷುಧಾ ॥
ಪಟುರಾಟ ಸರ್ವಸುಸಭಾಟವೀಷ್ವಯಂ
ಬುಧವರ್ಯಘೋರತರಜಂತುಪೂರ್ತಿಷು ॥ ೯೧ ॥

ಶ್ರೀ ವರಖೇಡಿ ನರಸಿಂಹಾಚಾರ್ಯರ ಗುಹೆಯಿಂದ ಹೊರಬಂದ ಪಟುವಾದ ಈ ನವಸಿಂಹರಾಜನು ಆನಂತರ ಪರೀಕ್ಷೆಯೆಂಬ ಹಸಿವೆಯಿಂದ, ದೊಡ್ಡಪಂಡಿತರೆಂಬ ಘೋರಪ್ರಾಣಿಗಳಿಂದ ತುಂಬಿದ ಎಲ್ಲ ಸಭೆಗಳೆಂಬ ಅರಣ್ಯಗಳಲ್ಲಿ ಸಂಚರಿಸಿದನು.

ಪೂನಾಪುರ್ಯಾಂ ಸದಸಿ ಸತತಂ ನೈಕಸಂವತ್ಸರೇಷು
ನ್ಯಾಯಾದ್ಯಾಸು ಪ್ರಥಿತಸುಪರೀಕ್ಷಾಸು ಸರ್ವಾಸು ವರ್ಯಮ್ ॥
ದೃಷ್ಟ್ವಾ ಕೋಟಿಕ್ರಮಸರಣಿಭಿಸ್ತರ್ಕಶಾಸ್ತ್ರೇಽತಿಹೃಷ್ಟಾಃ
ಕೃಷ್ಟಿಶ್ರೇಷ್ಠಾಃ ಪಟುತಮಮತಿಂ ಮಾನಯಾಮಾಸುರೇತಮ್ ॥ ೯೨ ॥

ಪೂನಾಪಟ್ಟಣದಲ್ಲಿ ಪ್ರತಿವರ್ಷವೂ ಸಭೆಯಲ್ಲಿ ಸತತವಾಗಿ ನ್ಯಾಯವೇದಾಂತ ಮೊದಲಾದ ಪ್ರಸಿದ್ಧಪರೀಕ್ಷೆಗಳಲ್ಲಿ ಎಲ್ಲೆಡೆಯೂ ಶ್ರೇಷ್ಠರಾಗಿರುವ ಈ ಶ್ರೀನಿವಾಸಾಚಾರ್ಯರನ್ನು ನೋಡಿ ಕೋಟಿಕ್ರಮಗಳ ಸರಣಿಯಿಂದ ತರ್ಕಶಾಸ್ತ್ರದಲ್ಲಿ ವಿಶೇಷವಾಗಿ ಆನಂದ ಹೊಂದಿದ ಪಂಡಿತ ಶ್ರೇಷ್ಠರು ಚತುರಮತಿಗಳಾದ ಇವರನ್ನು ಬಹಳ ಗೌರವಿಸಿದರು.

ಸಾಹಿತ್ಯಕೋವಿದಪದೇನ ಚ ತರ್ಕಚೂಡಾ -
ಮಣ್ಯಾಖ್ಯಸಾಧುಪದವೀಮಣಿನಾ ತಥೈವ ॥
ವೇದಾಂತಕೋವಿದಪದೇನ ಸದಸ್ತದೇನಂ
ಸಮ್ಮಾನಯತ್ಸ್ವಯಮಗಾದಸಮಾನಮಾನಮ್ ॥ ೯೩ ॥

ಸಾಹಿತ್ಯಕೋವಿದ, ನ್ಯಾಯಚೂಡಾಮಣಿ, ವೇದಾಂತಕೋವಿದ ಎಂಬ ಶ್ರೇಷ್ಠ ಪದವಿಗಳಿಂದ ಆ ಸಭೆಯು ಇವರನ್ನು ಸನ್ಮಾನಿಸಿ ತಾನು ಅಸಮಾನವಾದ ಗೌರವವನ್ನು ಹೊಂದಿತ್ತು.

ಬಡೋದಾಸಭಾಯಾಂ ಪರೀಕ್ಷಾವಿಜೇತಾ
ಸ ಚ ನ್ಯಾಯರತ್ನಾಭಿಧಾನೇನ ಮಾನ್ಯಃ ॥
ಗುರೋರ್ದಕ್ಷಿಣಾಂ ದಾಪಯಾಮಾಸ ಪಿತ್ರೇ
ತಥಾ ತಾತಸೇವಾರತಃ ಕೋಽಸ್ತಿ ಪುತ್ರಃ ॥ ೯೪ ॥

ಬಡೋದಾ ಸಭೆಯ ಪರೀಕ್ಷೆಯಲ್ಲಿ ವಿಜಯಿಯಾಗಿ 'ನ್ಯಾಯರತ್ನ' ಎಂಬ ಹೆಸರಿನಿಂದ ಗೌರವಿತರಾದ ಈ ಶ್ರೀನಿವಾಸಾಚಾರ್ಯರು ಗುರುದಕ್ಷಿಣೆಯನ್ನು (ಪರೀಕ್ಷೆಯಲ್ಲಿ ವಿಜಯಿಯಾದ ವಿದ್ಯಾರ್ಥಿಯ ಗುರುಗಳಿಗೆ ಸಲ್ಲಿಸುವ ಗೌರವವನ್ನು) ತಂದೆಗಳಾದ ಶ್ರೀ ಸಾತ್ವಿಕಾಚಾರ್ಯರಿಗೆ ಕೊಡಿಸಿದರು. ಇಂಥ ಸೇವೆಯನ್ನು ತಂದೆಗೆ ಸಲ್ಲಿಸುವ ಪುತ್ರನು ಇನ್ನ್ಯಾರು ಇದ್ದಾರೆ?

ಯಾ ಯಾಃ ಪರೀಕ್ಷಾ ಪರಿಷತ್ಸು ನಿಶ್ಚಿತಾ
ಅದ್ವೈತಪೂರ್ವೇಷು ಪರೇಷು ಪಂಡಿತೈಃ ॥
ಸ ತಾಸು ತಾಸು ಪ್ರತಿಭಾ ಪ್ರಭಾಬಲಾತ್
ರೇಜೇ ಜಯೀ ಪಂಡಿತರಾಜನಾಮಕಃ ॥ ೯೫ ॥

ಸಭೆಗಳಲ್ಲಿ ಅದ್ವೈತಾದಿ ಪರಮತಗಳ ವಿಷಯವಾಗಿ ಪಂಡಿತರಿಂದ ಯಾವ ಯಾವ ಪರೀಕ್ಷೆಗಳು ನಿರ್ಧಾರಿತವಾಗಿರುತ್ತಿತ್ತೋ, ಆ ಎಲ್ಲ ಪರೀಕ್ಷೆಗಳಲ್ಲಿ ಪ್ರತಿಭೆಯೆಂಬ ಪ್ರಭೆಯ ಸಾಮರ್ಥ್ಯದಿಂದ ವಿಜಯಿಗಳಾದ ಆ ಶ್ರೀನಿವಾಸಾರ್ಯರು 'ಪಂಡಿತರಾಜ' ಎಂಬ ಪದವಿಯುಳ್ಳವರಾಗಿ ವಿರಾಜಿಸಿದರು.

ಉಜ್ಜೈನ್ಯಾಂ ನಿಜಮಾಧುರೀಪದಕೃತೇಃ ಸಾಹಿತ್ಯಗೋಷ್ಠ್ಯಾಂ ಬುಧೈಃ
ಸಂಪ್ರಾಪ್ತೋತ್ತಮಮಾನನೋಽಥ ಬುಧರಾಡೌಂಧೇ ಸಭಾಯಾಮಯಮ್ ॥
ನಾಗೇಶಾಭಿಧವಿದ್ವಧೀಶಸವಿಧೇ ವಾಕ್ಯಾರ್ಥಮತ್ಯದ್ಭುತಂ
ಕುರ್ವನ್ ಸರ್ವಮನಸ್ಸ್ವಪೂರ್ವಸುಖಕೃತ್ಸರ್ವೈರಭೂನ್ಮಾನಿತಃ ॥ ೯೬ ॥

ಉಜ್ಜಯನಿಯಲ್ಲಿ ತಮ್ಮ 'ಮಾಧುರೀ' ಎಂಬ ಗದ್ಯಕೃತಿಗೆ ಸಾಹಿತ್ಯಗೋಷ್ಠಿಯಲ್ಲಿ ಎಲ್ಲ ಪಂಡಿತರಿಂದ ಗೌರವಹೊಂದಿದ ಪಂಡಿತವರ್ಯರಾದ ಆ ಶ್ರೀನಿವಾಸಾಚಾರ್ಯರು ಅನಂತರ, ಔಂಧರಾಜಧಾನಿಯಲ್ಲಿ ಒಂದು ಸಭೆಯಲ್ಲಿ ನಾಗೇಶ ಶಾಸ್ತ್ರಿಯೆಂಬ ವಿದ್ವದ್ವರ್ಯನ ಸಮೀಪದಲ್ಲಿ ಅದ್ಭುತವಾಗಿ ವಾಕ್ಯಾರ್ಥಮಾಡಿ ಎಲ್ಲರ ಮನಸ್ಸಿಗೆ ಅಪೂರ್ವ ಆನಂದ ನೀಡಿ ಎಲ್ಲರಿಂದಲೂ ಸನ್ಮಾನಿತರಾದರು.

ನ್ಯಾಯಾದಿಶಾಸ್ತ್ರೇಽಥ ವಿಶೇಷವಿತ್ತ್ವ
ಕಾಶ್ಯಾಮುವಾಸೈಷ ಯಶಸ್ತತಾಶಃ ॥

ವಿದ್ಯಾಸುಧಾಪಾನಮಲಂ ದಧಾನಃ
ನ ಖಲ್ವಲಂಬುದ್ಧಿಧರೋಽಸ್ತಿ ಕಶ್ಚಿತ್ ॥ ೯೭ ॥

ಅನಂತರದಲ್ಲಿ ನ್ಯಾಯಶಾಸ್ತ್ರಾದಿಗಳಲ್ಲಿ ವಿಶೇಷಜ್ಞಾನಕ್ಕಾಗಿ, ಯಶಸ್ಸಿನಿಂದ ದಿಕ್ಕುಗಳನ್ನೆಲ್ಲ ವ್ಯಾಪಿಸಿರುವ ಶ್ರೀನಿವಾಸಾಚಾರ್ಯರು ಕಾಶೀಯಲ್ಲಿ ವಾಸಮಾಡಿದರು. ವಿದ್ಯಾಮೃತದ ಪಾನವನ್ನು ಚೆನ್ನಾಗಿ ಮಾಡಿದವನು ಸಾಕು ಎಂಬ ಭಾವನೆಯನ್ನು ಮಾಡುವವನು ಯಾರೂ ಇಲ್ಲವಷ್ಟೆ.

ಬುಧಾನ್ ಸಮಾನ್ ಬಾಲಸಮಾನ್ ಧಿಯಾಲಂ
ಸಭಾಸು ಕುರ್ವಾಣಮುಮೇಶಪುರ್ಯಾಮ್ ॥
ಸ ಬಾಲಕೃಷ್ಣಾಭಿಧತರ್ಕಭೂಪಂ
ಸಂತೋಷಯನ್ನಾಪ ವಿಶೇಷವಿದ್ಯಾಮ್ ॥ ೯೮ ॥

ಕಾಶೀಯ ಸಭೆಯಲ್ಲಿ ಎಲ್ಲ ಪಂಡಿತರನ್ನು ತನ್ನ ಬುದ್ಧಿಯಿಂದ ಬಾಲಕರಿಗೆ ಸಮರನ್ನಾಗಿ ಮಾಡುವ ಬಾಲಕೃಷ್ಣ ಮಿಶ್ರನೆಂಬ ತರ್ಕ ಚಕ್ರವರ್ತಿಯನ್ನು ಸಂತೋಷಗೊಳಿಸುತ್ತ ಈ ಶ್ರೀನಿವಾಸಾಚಾರ್ಯರು ವಿಶೇಷವಿದ್ಯೆಯನ್ನು ಹೊಂದಿದರು.

ಅನುಗಮುಗಣಪೂರ್ಣೈಃ ಕ್ರೋಡಪತ್ರೈರ್ಗಭೀರಂ
ಕಣಭುಗತುಲಶಾಸ್ತ್ರಂ ಲೀಲಯಾಲಂ ಮಿಮಾನಮ್ ॥
ಸುಮತಿಮಿಹ ವಿನೈನಂ ತರ್ಕಭಟ್ಟಾರಕೋಽನ್ಯೋ
ನ ಹಿ ಭುವಿ ಭವಿತೇತ್ಥಂ ಬಾಲಕೃಷ್ಣೋ ಜಗೌ ತಮ್ ॥ ೯೯ ॥

"ಅನೇಕ ಅನುಗಮುಗಳಿಂದ ತುಂಬಿದ ಕ್ರೋಡಪತ್ರಗಳಿಂದ ಗಂಭೀರವಾದ, ಅಸದೃಶವಾದ ಕಾಣಾದಶಾಸ್ತ್ರವನ್ನು ಅನಾಯಾಸವಾಗಿ ಚೆನ್ನಾಗಿ ತಿಳಿಯುವ ಚತುರಮತಿಯಾದ ಇವರನ್ನು ಬಿಟ್ಟು ಮತ್ತೊಬ್ಬ ತರ್ಕ ಭಟ್ಟಾರಕ ಮುಂದೆ ಭೂಮಿಯಲ್ಲಿ ಆಗಲಾರ" ಎಂದು ಬಾಲಕೃಷ್ಣಮಿಶ್ರನು ಆ ಶ್ರೀನಿವಾಸಾಚಾರ್ಯರನ್ನು ಕೊಂಡಾಡಿದನು.

ಮೀಮಾಂಸಾಬ್ಧೌ ಘಟಭವನಿಭಂ ಶಾಬ್ದಕಲ್ಪದ್ರುಮಾಭಂ
ಗಾನಾಲಾಪಾಮಲಪರಿಮಲೈಃ ಪದ್ಯಪುಷ್ಪೈರ್ಭಜಂತಮ್ ॥
ಆರ್ಕಂ ಕೋಟಿಕ್ರಮಗಣಲಸತ್ತರ್ಕತೋ ವಿಕ್ರಮಂತಂ
ಶಿಷ್ಯಂ ವೀಕ್ಷ್ಯ ಸ್ಮರಹರಪುರೇ ಧ್ಯಾನರಾಡಾಪ ಮೋದಮ್ ॥ ೧೦೦ ॥

ಮೀಮಾಂಸಾಶಾಸ್ತ್ರವೆಂಬ ಸಮುದ್ರದಲ್ಲಿ ಕುಂಭಸಂಭವ (ಅಗಸ್ತ್ಯ) ನಂತಿರುವ, ವ್ಯಾಕರಣದಲ್ಲಿ ಕಲ್ಪವೃಕ್ಷದಂತಿರುವ, ಸಂಗೀತದ ಆಲಾಪನೆಯೆಂಬ ನಿರ್ಮಲಪರಿಮಳವುಳ್ಳ ಶ್ಲೋಕಗಳೆಂಬ ಪುಷ್ಪಗಳಿಂದ ಸೇವೆಮಾಡುತ್ತಿರುವ, ಕೋಟಿಕ್ರಮಗಳ ಸರಣಿಯಿಂದ ಕೂಡಿದ ತರ್ಕಶಾಸ್ತ್ರದಿಂದ

ಸೂರ್ಯನನ್ನು ಮೀರಿಸುವನಂತಿರುವ ಶಿಷ್ಯನಾದ ಈ ಶ್ರೀನಿವಾಸಾಚಾರ್ಯರನ್ನು ಕಾಶೀಯಲ್ಲಿ ನೋಡಿ ಶ್ರೀ ಸತ್ಯಧ್ಯಾನತೀರ್ಥರು ಬಹಳ ಸಂತೋಷ ಹೊಂದಿದರು.

ಧ್ಯಾನಾರ್ಯೇ ಹರನಗರೇ ವಿದಾಕರೇಽಸ್ಮಿನ್
ಅದ್ವೈತಾಭಿಧತಮಸೋ ದಿವಾಕರಾಭೇ ॥
ಅದ್ವೈತೀ ತದಸಹಮಾನತೀಕ್ಷ್ಣಧೀಮಾನ್
ಆಯಾಸೀದಥ ಬದರೀಶಶುಕ್ಲನಾಮಾ ॥ ೧೦೧ ॥

ಪಂಡಿತರಿಗೆ ಆಶ್ರಯವಾದ ಈ ಕಾಶಿಯಲ್ಲಿ ಶ್ರೀ ಸತ್ಯಧ್ಯಾನತೀರ್ಥರು ಅದ್ವೈತವೆಂಬ ಕತ್ತಲೆಗೆ ಸೂರ್ಯನಂತೆ ಇದ್ದಾಗ ಅದನ್ನು ಸಹಿಸದವನಾಗಿ ತೀಕ್ಷ್ಣಬುದ್ಧಿಯುಳ್ಳ ಬದರೀನಾಥಶುಕ್ಲನೆಂಬ ಅದ್ವೈತಿಯು ಆಗಮಿಸಿದ್ದನು.

ಶ್ರುತ್ಯರ್ಥವಾದಸಮಿತಾವಥ ಸಾತ್ವಿಕೋತ್ಥಃ
ಧ್ಯಾನಾರ್ಯಮಧ್ಯವಚನಾಪ್ತವಿಶೇಷಚೇತಾಃ ॥
ಶುಕ್ಲಂ ಜರಾಸುತಮಿವಾತ್ರ ನಿಹತ್ಯ ಸೋಽಭಾತ್
ಧ್ಯಾನಾರ್ಯಕೃಷ್ಣಪದಪದ್ಮಗಭೀಮಭೃಂಗಃ ॥ ೧೦೨ ॥

ಆನಂತರ ಸಾತ್ವಿಕಾಚಾರ್ಯರ ಪುತ್ರರಾದ ಆ ಶ್ರೀನಿವಾಸಾಚಾರ್ಯರು ವೇದಾರ್ಥಗಳ ವಾದವೆಂಬ ಯುದ್ಧದಲ್ಲಿ, ಶ್ರೀ ಸತ್ಯಧ್ಯಾನತೀರ್ಥರ ಮಧ್ಯಸ್ಥ ವಚನಗಳಿಂದ ವಿಶೇಷ ಬುದ್ಧಿಯುಳ್ಳವರಾಗಿ, ಭೀಮಸೇನ ದೇವರು ಜರಾಸಂಧನನ್ನು ವಧಿಸಿದಂತೆ ಆ ಶುಕ್ಲನೆಂಬ ಪಂಡಿತನನ್ನು ನಿರಾಕರಿಸಿ ಶ್ರೀ ಸತ್ಯಧ್ಯಾನತೀರ್ಥರೆಂಬ ಕೃಷ್ಣಪರಮಾತ್ಮನ ಪಾದಗಳೆಂಬ ಕಮಲಗಳಲ್ಲಿ ಭೀಮಸೇನದೇವರಂತೆ ದುಂಬಿಯಾಗಿ ಶೋಭಿಸಿದರು.

ಜ್ಞಾನವ್ಯಾಪಿಪದೇ ಬುಧೋತ್ತಮಪದೇ ದಿವ್ಯೇಽಥ ಗೋಷ್ಠ್ಯಂತರೇ
ಗುರ್ವಾದೇಶಮಣೀಶಶೋಭಿತಶಿರಾಃ ಶ್ರೀಸಾತ್ವಿಕಾರ್ಯಾತ್ಮಜಃ ॥
ಭೀಷ್ಮದ್ರೋಣಕೃಪೋಗ್ರಕರ್ಣಸದೃಶಾನ್ ವಿಶ್ವಾಂಶ್ಚ ಕಾಶ್ಯಾಂ ಜಯನ್
ಭಾಸಾಽಭಾಸತ ಸೋತ್ತರೋ ವಿಜಯವದ್ವೇದಾಂತವಾದಾಹವೇ ॥ ೧೦೩ ॥

ಆನಂತರ 'ಜ್ಞಾನವ್ಯಾಪಿ' ಎಂಬಲ್ಲಿ ಪಂಡಿತಶ್ರೇಷ್ಠರ ಸ್ಥಾನವಾದ ದಿವ್ಯವಾದ ಸಭೆಯಲ್ಲಿ ಶ್ರೀಸಾತ್ವಿಕಾಚಾರ್ಯಪುತ್ರರಾದ ಶ್ರೀನಿವಾಸಾಚಾರ್ಯರು ಗುರುಗಳಾದ ಶ್ರೀಸತ್ಯಧ್ಯಾನತೀರ್ಥರ ಆದೇಶವೆಂಬ ಶ್ರೇಷ್ಠಮಣಿಯಿಂದ ಶೋಭಿಸುವ ಶಿರಸ್ಸುಳ್ಳವರಾಗಿ, ಭೀಷ್ಮದ್ರೋಣ ಕೃಪ ಉಗ್ರ ಕರ್ಣನಿಗೆ ಸದೃಶರಾದ ಎಲ್ಲ ಪಂಡಿತರನ್ನು ವೇದಾಂತವಾದವೆಂಬ ಯುದ್ಧದಲ್ಲಿ ಗೆಲ್ಲುತ್ತ, ಕಾಶೀಯಲ್ಲಿ ಉತ್ತರಸಹಿತನಾದ ವಿಜಯ (ಅರ್ಜುನ)ನಂತೆ ಕಾಂತಿಯಿಂದ ಕಂಗೊಳಿಸಿದರು.

ಸತ್ಯಧ್ಯಾನಾಭಿಧಾನೋ ದ್ವಿಜಕುಲನಿಲಯೋ ದೇವತಾಪಾದಪೋಽಥ
ಜ್ಞಾನವ್ಯಾಪ್ಯಾಬ್ಧಿಲಬ್ಧಾಂ ಮಧುರಜಯಸುಧಾಂ ಪಾದಯೋರರ್ಪಯಂತಮ್ ॥
ವೀಕ್ಷ್ಯ ಪ್ರೀತ್ಯಾನ್ವಗೃಹ್ಣಾತ್ಸದಸಿ ಬುಧವರೈರ್ಭೂಷಿತೇ ಯಂ ಸ್ವಶಿಷ್ಯಂ
ಸಂಪ್ರಾಪ್ತಾಶೇಷವಿದ್ಯಂ ಬುಧತತಿಮಹಿತಂ ಕಿಮ್ವಹಂ ವರ್ಣಯೇ ತಮ್ ॥ ೧೦೪॥

ದ್ವಿಜ (ಹಕ್ಕಿಗಳು) ವೃಂದಕ್ಕೆ ಆಶ್ರಯರಾದ ಶ್ರೀಸತ್ಯಧ್ಯಾನತೀರ್ಥರು ಕಲ್ಪವೃಕ್ಷದಂತೆ ಇದ್ದಾರೆ. ಈ ಕಲ್ಪವೃಕ್ಷದ ಪಾದಕ್ಕೆ (ಬುಡಕ್ಕೆ) 'ಜ್ಞಾನವ್ಯಾಪೀ' ಎಂಬ ಸಮುದ್ರದಿಂದ ಪ್ರಾಪ್ತವಾದ ಮಧುರವಾದ ವಿಜಯವೆಂಬ ಅಮೃತವನ್ನು ಅರ್ಪಿಸಿದಾಗ ಪ್ರೀತಿಯಿಂದ ನೋಡುತ್ತಾ ಶ್ರೀಸತ್ಯಧ್ಯಾನತೀರ್ಥರು ಯಾವ ತಮ್ಮ ಶಿಷ್ಯನನ್ನು ಅನುಗ್ರಹಿಸಿದರೋ, ಅಂಥ ಎಲ್ಲ ವಿದ್ಯೆಗಳನ್ನು ಹೊಂದಿರುವ, ಪಂಡಿತರ ಮಂಡಲಿಯಿಂದ ಸ್ತುತ್ಯರಾದ, ಶ್ರೀನಿವಾಸಾಚಾರ್ಯರನ್ನು ಎಷ್ಟು ವರ್ಣಿಸುವೆ ?

ಮಿಥ್ಯಾತ್ವಲಕ್ಷ್ಮವಿಷಯೇ ದ್ವಿತಯೇಽದ್ವಿತೀಯಃ
ತತ್ರಾಥ ಸಾತ್ವಿಕಸುತೋಽಯಮನಂತಕೃಷ್ಣಂ ॥
ವಾದೇ ವಿಜಿಗ್ಯ ವಚಸೋಽಸ್ಯದದತ್ತದಾಂತ್ಯ
ಮಾನಂತ್ಯ ಮಾಶು ವಿಶದಸ್ವಯಶಾಂಸ್ಯನೈಷೀತ್ ॥ ೧೦೫ ॥

ಆನಂತರ ಆ ಕಾಶಿಯಲ್ಲಿ ಅಸದೃಶ ಪಾಂಡಿತ್ಯವುಳ್ಳ ಶ್ರೀ ಸಾತ್ವಿಕಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರು ದ್ವಿತೀಯ ಮಿಥ್ಯಾತ್ವದ ವಿಷಯದಲ್ಲಿ ನಡೆದ ವಾದದಲ್ಲಿ, ಅನಂತಕೃಷ್ಣಶಾಸ್ತ್ರಿಯೆಂಬ ಪಂಡಿತನನ್ನು ಸೋಲಿಸಿ ಅವನ ಮಾತಿಗೆ ಅಂತ್ಯ ಹಾಡಿದರು. ಹಾಗೆ ಕೂಡಲೇ ತಮ್ಮ ನಿರ್ಮಲಯಶಸ್ಸಿಗೆ ಆನಂತ್ಯವನ್ನು ನೀಡಿದರು.

ಆಗತಂ ಹರಪುರಾನ್ನಿಜಪಲ್ಲಿಂ
ಪೂರ್ವಮೇವ ಯಶಸಾಗತಮತ್ರ ॥
ಸಾತ್ವಿಕಾರ್ಯತನಯಂ ವಿನಯೇತಂ
ಸ್ವಾಗತೀಕೃತವತೀ ಜನತೈತಮ್ ॥ ೧೦೬ ॥

ಆನಂತರ, ಶ್ರೀನಿವಾಸಾಚಾರ್ಯರು ಹರನ ಪುರವಾದ ಕಾಶಿಯಿಂದ ತಮ್ಮ ಹಳ್ಳಿಗೆ ಆಗಮನ ಮಾಡಿದರು. ಆದರೆ ಮೊದಲೇ ಇಲ್ಲಿ ಅವರು ಯಶಸ್ಸಿನಿಂದ ಬಂದಿದ್ದರು. ಇಂಥ ವಿನಯಸಂಪನ್ನರಾದ ಶ್ರೀಸಾತ್ವಿಕಾಚಾರ್ಯರ ಪುತ್ರರಿಗೆ ಜಾಲೀಹಾಳದ ಜನತೆ ಸ್ವಾಗತ ನೀಡಿತು.

ಸರ್ವದಿಗ್ವಿಜಯಿನಂ ನಿಜಸೂನುಂ
ದಂಪತೀ ತು ಚರಣೌ ಪ್ರಣಮಂತಮ್ ॥

ವೀಕ್ಷ್ಯ ಸಂತುತುಷತುರ್ನ ಹಿ ಚಿತ್ರಂ
ಗ್ರಾಮ ಏವ ಸುಖಸಾಗರಮಗ್ನೇ ॥ ೧೦೭ ॥

ಎಲ್ಲ ವಿದ್ಯೆಗಳಲ್ಲಿ ಎಲ್ಲ ಕಡೆಗಳಲ್ಲಿ ವಿಜಯಿಯಾದ, ಪಾದಗಳಿಗೆ ಪ್ರಣಾಮ ಮಾಡುವ ಆ ತಮ್ಮ ಮಗನನ್ನು ನೋಡಿ ಶ್ರೀ ಸಾತ್ವಿಕಾಚಾರ್ಯ ದಂಪತಿಗಳು ಆನಂದ ಹೊಂದಿದರೆಂಬುದು ಏನು ಆಶ್ಚರ್ಯ? ಏಕೆಂದರೆ ಅವರ ಆಗಮನದಿಂದ ಇಡೀ ಹಳ್ಳಿಯೇ ಆನಂದದ ಕಡಲಿನಲ್ಲಿ ಮುಳುಗಿತ್ತು.

ಶಾಸ್ತ್ರ ಪಾಠನ ಪಟುರ್ನಿಜಪಲ್ಯಾಂ
ಸುಂದರಂ ಪ್ರವಚನಂ ವಿದಧಾನಃ ॥
ಶಂಭುಲಿಂಗಮುಖಭಂಗಕರೋಽಯಂ
ಜಾಲಿಹಾಳಜನಭೂತಿರಿವಾಽಭಾತ್ ॥ ೧೦೮ ॥

ಸಚ್ಛಾಸ್ತ್ರಗಳ ಪಾಠದಲ್ಲಿ ಚತುರರಾದ ಶ್ರೀನಿವಾಸಾಚಾರ್ಯರು ತಮ್ಮ ಹಳ್ಳಿಯಲ್ಲಿ ಸುಂದರವಾಗಿ ಪ್ರವಚನವನ್ನೂ ಮಾಡುತ್ತಿದ್ದರು. ಹಳ್ಳಿಯ ಜನರ ಅಪೇಕ್ಷೆಯಂತೆ ಶಂಭುಲಿಂಗಶಾಸ್ತ್ರಿಯ ಮುಖಭಂಗ ಮಾಡಿದ ಇವರು ಆ ಹಳ್ಳಿಯ ಜನರಿಗೆ ಐಶ್ವರ್ಯದಂತೆ ಶೋಭಿಸಿದರು.

ಶಿವಯೋಗಮಂದಿರಗಶಾಸ್ತ್ರಿಣಂ ಜಯನ್
ಅಥ ಪಂಚಲಕ್ಷಣಪಟುಂ ಸ ಧೀರರಾಟ್ ॥
ವಿದಧತ್ ಸ್ವಶಿಷ್ಯಮುಮುನಾ ಯುತೋ ಯಯೌ
ಗುರುಶೋಭಿತಾಂ ತಿರುಪತಿಸ್ಥಿತಾಂ ಸಭಾಮ್ ॥ ೧೦೯ ॥

ಶಿವಯೋಗಮಂದಿರದಲ್ಲಿ ಇರುವ ಶಾಸ್ತ್ರಿಯನ್ನು ಜಯಿಸಿದ ಆ ಪಂಡಿತರಾಜರಾದ ಶ್ರೀನಿವಾಸಾಚಾರ್ಯರು ಆನಂತರ ತಮ್ಮ ಒಬ್ಬ ಶಿಷ್ಯನನ್ನು ಪಂಚಲಕ್ಷಣೀಯಲ್ಲಿ ಚತುರನನ್ನಾಗಿ ಮಾಡಿ, ಅವನಿಂದ ಜೊತೆಗೂಡಿಕೊಂಡು ಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರು ವಿರಾಜಮಾನರಾಗಿರುವ ತಿರುಪತಿಯ ಸಭೆಗೆ ನಡೆದರು.

ಶಿಷ್ಯಂ ನವಂ ನವಗುರೋರಸಹಿಷ್ಣವೋಽತ್ರ
ಕೇಚಿದ್ಬುಧಾಶ್ಚ ಬಹುಧಾ ವಿದಧುಃ ಪರೀಕ್ಷಾಮ್ ॥
ಶ್ರೀಸಾತ್ವಿಕಾರ್ಯಸುತವರ್ಯಸುಶಿಕ್ಷಿತೋಽಯಂ
ಸರ್ವೋತ್ತರಪದ ಇಯಾಯ ಪರಂ ಸುಮಾನಮ್ ॥ ೧೧೦ ॥

ಹೊಸದಾಗಿ ಗುರುವೆನಿಸಿರುವ ಶ್ರೀನಿವಾಸಾಚಾರ್ಯರ ಹೊಸಶಿಷ್ಯನಿಗೆ ಏನೂ ತಿಳಿಯದೆಂದು ಅಸಹನೆಯಿಂದ ಕೆಲವು ಪಂಡಿತರು ಬಹಳ ವಿಧದಿಂದ ಪರೀಕ್ಷೆಮಾಡಿದರು. ಆದರೆ

ಶ್ರೀಸಾತ್ವಿಕಾಚಾರ್ಯರ ಪುತ್ರವರ್ಯರಾದ ಶ್ರೀನಿವಾಸಾಚಾರ್ಯರಿಂದ ಚೆನ್ನಾಗಿ ಶಿಕ್ಷಣಪಡೆದಿರುವ ಆ ಶಿಷ್ಯನು ಎಲ್ಲರಿಗೂ ಉತ್ತರ ನೀಡುತ್ತ ಒಳ್ಳೆ ಗೌರವವನ್ನು ಹೊಂದಿದನು.

**ದೃಷ್ಟ್ವಾ ಜಗಾದ ಬುಧಕಾರ್ಯಮಿಮಂ ಯತೀಂದ್ರೋ**
**ಮಾನಂ ವಿದಾಂ ತವ ತು ನಾಸ್ತಿ ವಿನಾ ಪರೀಕ್ಷಾಮ್ ॥**
**ವೇತ್ತ್ಯಾಪಿ ತಂ ಬುಧಮಿತಿ ಪ್ರಕಟಚಿಕೀರ್ಷುಃ**
**ವೇದ್ಯೋ ಹಿ ಹೇಮಮಹಿಮಾಗ್ನಿಪರೀಕ್ಷಣೇನ ॥ ೧೧೧ ॥**

ಯತಿವರ್ಯರಾದ ಶ್ರೀ ಸತ್ಯಧ್ಯಾನತೀರ್ಥರು ಹೊಸದಾಗಿ ಪಂಡಿತರ ಸಾಲಿನಲ್ಲಿ ಪ್ರವೇಶಿಸುವ ಈ ಶ್ರೀನಿವಾಸಾಚಾರ್ಯರ ಬಗ್ಗೆ ಇತರ ಪಂಡಿತರ ನಡತೆಯನ್ನು ನೋಡಿ 'ನಿನಗೆ ಪರೀಕ್ಷೆಯಿಲ್ಲದೆ ಪಂಡಿತರ ಗೌರವವಿಲ್ಲ' ವೆಂದು ಹೇಳಿದರು. ಶ್ರೀನಿವಾಸಾಚಾರ್ಯರನ್ನು ಪಂಡಿತರೆಂದು ತಾವು ತಿಳಿದಿದ್ದರೂ ಅದನ್ನು ಪ್ರಕಟಮಾಡುವುದಕ್ಕಾಗಿ ಹೀಗೆ ಸತ್ಯಧ್ಯಾನತೀರ್ಥರು ಹೇಳಿದ್ದರು. ಸುವರ್ಣದ ಮಹಿಮೆಯು ಅಗ್ನಿಪರೀಕ್ಷೆಯಿಂದ ಮಾತ್ರ ತಿಳಿಯುತ್ತದೆಯಷ್ಟೆ.

**ಸಪದಿ ಸಮಿತೌ ಧೀರೋ ವೀರೋಽವದದ್ಗುರುರಾಜಜೋ**
**ಗುರುವರಪದಾಂಭೋಜೇ ರಾಜಾಲಿವದ್ವಿಲಸನ್ನಯಮ್ ॥**
**ಭವತು ಚ ಭವದ್ವೀಕ್ಷಾರಕ್ಷಸ್ಯ ಪಕ್ಷಯುಗೇನ ಮೇ**
**ಬುಧಮಣಿಗಣೈರ್ಗೇಯೇ ನ್ಯಾಯಾಮೃತೇ ಚ ಪರೀಕ್ಷಣಮ್ ॥ ೧೧೨ ॥**

ಕೂಡಲೆ ಸಭೆಯಲ್ಲಿ ಧೀರರಾದ, ವೀರರಾದ, ಶ್ರೀ ಗುರುರಾಜಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರು ಗುರುಗಳ ಪಾದಕಮಲದಲ್ಲಿ ಭೃಂಗರಾಜನಂತೆ ವಿರಾಜಿಸುತ್ತಾ "ಸ್ವಾಮಿನ್, ತಮ್ಮ ನೋಟದಿಂದ ರಕ್ಷಣೆಯುಳ್ಳ ನನಗೆ ಪಂಡಿತಪ್ರಕಾಂಡರ ಮಂಡಲಿಯಿಂದ ಸ್ತುತ್ಯವಾದ ನ್ಯಾಯಾಮೃತದ ವಿಷಯದಲ್ಲಿ ಎರಡು ಪಕ್ಷಗಳಿಂದ (ಪೂರ್ವಪಕ್ಷ ಸಿದ್ಧಾಂತ ಪಕ್ಷಗಳಿಂದ ಹಾಗು ಎರಡು ಪಕ್ಷಗಳು ಕಳೆದನಂತರ) ಪರೀಕ್ಷೆ ನಡೆಯಲಿ ಎಂದು ನುಡಿದರು.

**ಧರನ್ನಾಜ್ಞಾಂ ಮಂತ್ರಾಕ್ಷತಮಥ ಗುರೋಃ ಸ್ವಂ ಪದಮಿತಃ**
**ಪಠನ್ ಶ್ರೀಮನ್ನ್ಯಾಯಾಮೃತಕಠಿಣ ವಾಕ್ಯಾರ್ಥಸರಣಿಮ್ ॥**
**ಅಹೋರಾತ್ರಂ ಚಕ್ರೇ ತಪ ಇವ ವಿಮರ್ಶಂ ಸ ಸುದೃಶಾ**
**ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನ ಚ ಸುಖಮ್ ॥ ೧೧೩ ॥**

ಗುರುಗಳ ಅಪ್ಪಣೆಯನ್ನು ಹಾಗು ಮಂತ್ರಾಕ್ಷತೆಯನ್ನು ಧರಿಸುತ್ತಾ ತಮ್ಮ ಸ್ಥಾನವಾದ ಜಾಲೀಹಾಳಕ್ಕೆ ಆಗಮಿಸಿದರು. ಶ್ರೀನ್ಯಾಯಾಮೃತದ ಕಠಿಣವಾದ ವಾಕ್ಯಾರ್ಥ ಸರಣಿಯನ್ನು ಓದುತ್ತಾ ಒಳ್ಳೆ ಬುದ್ಧಿಯಿಂದ ವಿಮರ್ಶೆಯನ್ನು ತಪಸ್ಸಿನಂತೆ ಹಗಲಿರುಳೂ ಮಾಡಿದರು.

ಬುದ್ಧಿವಂತನಾದ ಹಾಗು ಸಿದ್ಧಿಯನ್ನು ಬಯಸುವವನು ಸುಖವನ್ನು ಹಾಗು ದುಃಖವನ್ನು ಎಣಿಸುವುದಿಲ್ಲ.

ಶ್ರೀನ್ಯಾಯಾಮೃತಮಂಡನೇ ಪಟುರಯಂ ಮಾಯಾವಿವಾಕ್ಖಂಡನೇ
ತತ್ರಾಭ್ಯಸ್ಯ ತರಂಗಿಣೀಂ ಚ ಸತತಂ ನಾನಾವಿಧಾಷ್ಟಿಪ್ಪಣೀಃ ॥
ನವ್ಯನ್ಯಾಯದಿಶಾ ಭೃಶಂ ನವಪರಿಷ್ಕಾರಾದಿದರ್ಶೀ ಯಯೌ
ಶ್ರೀಮಧ್ವಾರ್ಯಮಹೋತ್ಸವೇಽಭಿನವಸನ್ಮಧ್ವಾರ್ಯಸಂಸನ್ಮಹಮ್ ॥ ೧೧೪ ॥

ಶ್ರೀ ನ್ಯಾಯಾಮೃತವನ್ನು ಮಂಡನೆಮಾಡುವುದರಲ್ಲಿ ಹಾಗೂ ಮಾಯಾವಿ ಅದ್ವೈತಿಗಳ ವಾಕ್ಯವನ್ನು ಖಂಡಿಸುವುದರಲ್ಲಿ ಚತುರರಾದ ಈ ಶ್ರೀನಿವಾಸಾಚಾರ್ಯರು ತರಂಗಿಣಿಯನ್ನು ಹಾಗೂ ಅನೇಕವಿಧವಾದ ಟಿಪ್ಪಣಿಗಳನ್ನು ನಿರಂತರ ಅಭ್ಯಾಸಮಾಡಿ, ನವೀನನ್ಯಾಯಶಾಸ್ತ್ರದ ಶೈಲಿಯಲ್ಲಿ ಹೊಸಹೊಸ ಪರಿಷ್ಕಾರಗಳನ್ನು ಕಂಡು ಶ್ರೀಮಧ್ವನವಮಿಯ ಮಹೋತ್ಸವಕ್ಕೆ ಏರ್ಪಡಿಸಿರುವ ಅಭಿನವ ಮಧ್ವಾಚಾರ್ಯರೆನಿಸಿದ ಶ್ರೀಸತ್ಯಧ್ಯಾನತೀರ್ಥರಿಂದ ಕಂಗೊಳಿಸಿದ ಸಭೆಯ ಮಹೋತ್ಸವಕ್ಕೆ ಆಗಮಿಸಿದರು.

ಆಯಾತಂ ಪದನತಮಸ್ತಕಂ ಯತೀಶೋ
ವೀಕ್ಷ್ಯೈತಂ ಶುಭತಮಸೂಕ್ಷ್ಮಶೇಮುಷೀತಮ್ ॥
ದೋಷಜ್ಞಾನ್ ಪರಿಷದಿ ಭೂಷಿತಾನದಿಕ್ಷತ್
ದಕ್ಷೈತಚ್ಛುಭಧಿಷಣಾಪರೀಕ್ಷಣಾರ್ಥಂ ॥ ೧೧೫ ॥

ಕಾಲುಗಳ ಬಳಿ ಶಿರಸ್ಸನ್ನು ತಗ್ಗಿಸಿ (ವಂದಿಸಿ) ಮಾತಿನಂತೆ ಆಗಮಿಸಿದ ಬಹಳ ಒಳ್ಳೆಯ ಸೂಕ್ಷ್ಮ ಬುದ್ಧಿಯುಳ್ಳ ಈ ಶ್ರೀನಿವಾಸಾಚಾರ್ಯರನ್ನು ನೋಡಿದ ಯತಿವರ್ಯರಾದ ಶ್ರೀ ಸತ್ಯಧ್ಯಾನತೀರ್ಥರು ಇವರ ದಕ್ಷವಾದ ಬುದ್ಧಿಯನ್ನು ಪರೀಕ್ಷಿಸಿರೆಂದು ಸಭೆಯಲ್ಲಿ ವಿರಾಜಮಾನರಾದ ದೋಷವನ್ನು ಹುಡುಕುವ ಪಂಡಿತರಿಗೆ ಆದೇಶಿಸಿದರು.

ವಿದ್ಯಾದೀಪ್ತಿರ್ಭವತು ವಿತತೇತ್ಯಾಶಯಾ ತಸ್ಯ ಕೈಶ್ಚಿತ್
ಅಜ್ಞೋ ಭೂಯಾದಯಮಿತಿ ಧಿಯಾ ನೈಕಭಂಗ್ಯಾ ಸಭಾಯಾಮ್ ॥
ದೋಷಜ್ಞೈಶ್ಶೈಃ ಕಠಿಣಕಠಿಣೇ ಪ್ರಶ್ನಜಾತೇ ಪ್ರಜಾತೇ
ಸರ್ವೇ ಕೌತೂಹಲವಿದಲಿತಂ ನ್ಯಕ್ಷಿಪನ್ನಕ್ಷಿ ತಸ್ಮಿನ್ ॥ ೧೧೬ ॥

ಆ ಶ್ರೀನಿವಾಸಾಚಾರ್ಯರ ವಿದ್ಯಾಪ್ರಕಾಶವು ವಿಸ್ತಾರವಾಗಲಿ ಎಂಬ ಅಪೇಕ್ಷೆ ಕೆಲವರಿಗಿದ್ದರೆ ಮತ್ತೆ ಕೆಲವರು ಈಗ ಇವರು ದಡ್ಡನೆಂದು ಸಾಬೀತಾಗಲಿ ಎಂಬ ಬುದ್ಧಿಯುಳ್ಳವರಾಗಿದ್ದರು. ಹೀಗೆ ಅನೇಕ ರೀತಿಯಿಂದ ದೋಷವನ್ನು ಹುಡುಕುವ ಪಂಡಿತವರ್ಯರು ಅತ್ಯಂತ ಕಠಿಣವಾದ

ಪ್ರಶ್ನೆಗಳನ್ನು ಕೇಳಿದಾಗ ಅಲ್ಲಿ ಸೇರಿರುವ ಜನರೆಲ್ಲರು ಕುತೂಹಲದಿಂದ ತೆರೆದಿರುವ ತಮ್ಮ ಕಂಗಳನ್ನು ಆ ಶ್ರೀನಿವಾಸಾಚಾರ್ಯರ ಮೇಲೆ ನೆಟ್ಟರು.

ಸ್ಫುಟಂ ಝುಟಿತಿ ನಿರ್ಯಯೌ ದ್ಯುತಟನೀವ ವಕ್ತ್ರಾಂಬರಾತ್
ಗಿರಾಂ ಸರಣಿರದ್ಭುತಾ ಬಹುವಿಧಾರ್ಥಸಂಪೂರಿತಾ ॥
ರಮೇಶಚರಣಾಶ್ರಿತಾ ಕಠಿಣತರ್ಕಭಂಗಾವೃತಾ
ಪರೀಕ್ಷಕಗಿರೋಽಪಿ ಯತ್ರಕಿಲ ಶುಷ್ಕಪತ್ರಾಯಿತಾಃ ॥ ೧೧೭ ॥

ಕೂಡಲೇ ಶ್ರೀನಿವಾಸಾಚಾರ್ಯರ ಮುಖವೆಂಬ ಆಕಾಶದಿಂದ ಅದ್ಭುತವಾದ ವಾಕ್ ಸರಣಿಯು ಗಂಗೆಯಂತೆ ಸ್ಫುಟವಾಗಿ ಹೊರಹೊಮ್ಮಿತು. ಆ ವಾಗ್ಗಂಗೆಯು ಅನೇಕ ವಿಧವಾದ ಅರ್ಥಗಳಿಂದ ಗರ್ಭಿತವಾಗಿತ್ತು, ಪರಮಾತ್ಮನ ಪಾದಗಳನ್ನು ಆಶ್ರಯಿಸಿತ್ತು, ಕಠಿಣವಾದ ನ್ಯಾಯಗಳೆಂಬ ಸುಳಿಗಳಿಂದ ತುಂಬಿತ್ತು. ಇಂತಹ ಈ ವಾಗ್ಗಂಗೆಯಲ್ಲಿ ಪರೀಕ್ಷಕರ ಮಾತುಗಳು ತರಗೆಲೆಯಂತೆ ಕೊಚ್ಚಿ ಹೋಗಿತ್ತು.

ದಶಾಂತರಗಿರಾಶುಗಾಶನಶರೀರಶಾಯ್ಯಾಶ್ರಯಂ
ಸುವರ್ಣಮಯಟಿಪ್ಪಣೀಮಣಿಗಣಾಂತರಂ ಸುಂದರಮ್ ॥
ಯತಿಪ್ರವರಚಂದ್ರಿಕಾಕೃದುದಿತಾಮೃತಾವಿರ್ಭವಂ
ಗತಾ ವಿಬುಧಧೀಧುನೀಗಮನಧಾಮ ಕೃತ್ಯಂಬುಧಿಮ್ ॥ ೧೧೮ ॥

ಶ್ರೀ ಪೂರ್ಣಪ್ರಜ್ಞಾಚಾರ್ಯರ ಮಾತುಗಳೆಂಬ ಶೇಷನ ಶರೀರದಲ್ಲಿ ಪವಡಿಸಿರುವ ಶ್ರೀಹರಿಗೆ ನಿಲಯವಾದ, ಸುವರ್ಣಮಯವಾದ ಟಿಪ್ಪಣಿಗಳೆಂಬ ಮಣಿಗಳ ಗುಂಪಿನಿಂದ ತುಂಬಿರುವ, ಸುಂದರವಾದ, ಹಾಗೂ ಯತಿವರ್ಯರಾದ ಚಂದ್ರಿಕಾಚಾರ್ಯರಿಂದ ನುಡಿಯಲ್ಪಟ್ಟ ವಾಕ್ಯವೆಂಬ ಅಮೃತಕ್ಕೆ ಆವಿರ್ಭಾವ ನೀಡುವ ಮತ್ತು ಪಂಡಿತರ ಬುದ್ಧಿಯೆಂಬ ನದಿಗಳ ಗಮನಕ್ಕೆ ಮನೆಯಾದ ಶ್ರೀನ್ಯಾಯಾಮೃತವೆಂಬ ಸಮುದ್ರವನ್ನು ಕುರಿತು ಶ್ರೀನಿವಾಸಾಚಾರ್ಯರ ಆ ವಾಗ್ಗಂಗೆಯು ಪ್ರವಹಿಸುತ್ತಿತ್ತು.

ಇಯಾಯ ಮುದಮೀಶವತ್ಸಪದಿ ಯಾಂ ಧರನ್ ಧ್ಯಾನರಾಟ್
ವಿಜಹ್ರುರಪಿಯತ್ರ ಸದ್ವಿಬುಧಧೀದ್ಯುವಧ್ವಸ್ತದಾ ॥
ಯದೂರ್ಮಿತರಸೈಕ್ಯವಾಗ್ವಿಷಕರದ್ರುರುತ್ಪಾಟಿತಃ
ಸುಯುಕ್ತಿತಪನೋತ್ಥಿತಾಗಮಸರಸ್ವತೀಸಂಯುತಾ ॥ ೧೧೯ ॥

ಆ ವಾಗ್ಗಂಗೆಯನ್ನು ಧರಿಸಿ ಸತ್ಯಧ್ಯಾನತೀರ್ಥರು ರುದ್ರದೇವರಂತೆ ಆನಂದವನ್ನು ಹೊಂದಿದರು. ಆಗ ಆ ಗಂಗೆಯಲ್ಲಿ ದೇವತಾಸ್ತ್ರೀಯರಂತೆ ಸಜ್ಜನರ ಬುದ್ಧಿಯು ವಿಹಾರ ಮಾಡಿತು. ಆ ಗಂಗೆಯ

ಅಲೆಗಳ ಹೊಡೆತದಿಂದ ಐಕ್ಯವಾದವೆಂಬ ವಿಷವೃಕ್ಷವು ಬುಡಮೇಲಾಗಿ ನಾಶಹೊಂದಿತು. ಇಂತಹ ಆ ವಾಗ್ಗಂಗೆಯು ಸದ್ಯುಕ್ತಿಗಳೆಂಬ ಯಮುನಾನದಿಯಿಂದ ಸದಾಗಮಗಳೆಂಬ ಸರಸ್ವತಿಯಿಂದ ಕೂಡಿಕೊಂಡು ತ್ರಿವೇಣಿಯಂತೆ ಕಂಗೊಳಿಸುತ್ತಿತ್ತು.

ಇತ್ಥಂ ತತ್ರ ಪರೀಕ್ಷಣೇऽತಿಕಠಿಣೇ ಸಂಪೂರ್ಣವಿದ್ವದ್ಗಣೇ
ನಿಷ್ಪ್ರಶ್ನೇ ನವನಂದತೀರ್ಥನಯನಾನಂದಪ್ರಭೂತಾಮೃತೈಃ ॥
ವಿದ್ವದ್ವರ್ಯಪದೇऽಭಿಷಿಕ್ತಸುತನುಶ್ಶುಭ್ರಸ್ವಭಾಸ್ವದ್ಯಶಃ -
ಪೀಯೂಷೇಣ ವವರ್ಷ ಸರ್ವಭುವನಂ ಶ್ರೀಸಾತ್ವಿಕಾರ್ಯಾತ್ಮಜಃ ॥ ೧೨೦ ॥

ಹೀಗೆ ಅಲ್ಲಿ ಅತ್ಯಂತ ಕಠಿಣಪರೀಕ್ಷೆ ನಡೆದಾಗ ಎಲ್ಲ ಪಂಡಿತರು ಪ್ರಶ್ನೆಯಿಲ್ಲದೇ ಮೌನರಾದಾಗ, ಅಭಿನವ ಆನಂದತೀರ್ಥರೆನಿಸಿದ ಶ್ರೀ ಸತ್ಯಧ್ಯಾನತೀರ್ಥರ ಕಂಗಳಲ್ಲಿ ಆನಂದದಿಂದ ಹೊರಬಂದ ಅಮೃತಬಿಂದುಗಳಿಂದ ಪಂಡಿತೋತ್ತಮರ ಸ್ಥಾನದಲ್ಲಿ ಶ್ರೀಸಾತ್ವಿಕಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರು ಅಭಿಷಿಕ್ತರಾದರು. ಆಗ ಎಲ್ಲ ಭೂಮಂಡಲದಲ್ಲಿ ಇವರ ನಿರ್ಮಲವಾದ ಕೀರ್ತಿಯೆಂಬ ಅಮೃತದ ವರ್ಷಣವು ನಡೆದಿತ್ತು.

ವಂದೇ ಯೇನ ವಿಶುದ್ಧಪೈಠಣಕುಲಸ್ಕಾಲಃ ಫಲಿತ್ವಂ ಗತಃ
ತಂ ಶ್ರೀಶಪ್ರಿಯಸಾತ್ವಿಕಾರ್ಯಯಮುನಾನಂದಪ್ರವೃದ್ಧಿಪ್ರದಮ್ ॥
ವೃದ್ಧ್ಯಾ ಚಂದ್ರಮಹಸ್ಕರಂ ಪ್ರತಿಭಯಾ ಸತ್ಕರ್ಮಣಾ ಷಣ್ಮುಖಂ
ರೂಪೇಣ ಸ್ಮರಮಾರುಣಿಂ ಗುರುವರಪ್ರೀತ್ಯಾಂಬುಧಿಂ ವಿದ್ಯಯಾ ॥ ೧೨೧ ॥

ಯಾವ ಶ್ರೀನಿವಾಸಾಚಾರ್ಯರಿಂದ ಪರಿಶುದ್ಧವಾದ, ಪೈಠಣವಂಶ ವೃಕ್ಷವು ಫಲಭರಿತವೆಂದಾಯಿತೋ ಅಂಥಾ, ಶ್ರೀಪತಿಗೆ ಪ್ರಿಯರಾದ ಶ್ರೀಸಾತ್ವಿಕಾಚಾರ್ಯ ಹಾಗೂ ಯಮುನಾಬಾಯಿಯವರ ಆನಂದಕ್ಕೆ ಅಭಿವೃದ್ಧಿ ನೀಡುವ, ದೈಹಿಕ ಅಭಿವೃದ್ಧಿಯಿಂದ ಚಂದ್ರನಂತಿರುವ, ಬೌದ್ಧಿಕ ಪ್ರತಿಭೆಯಿಂದ ಸೂರ್ಯನಂತಿರುವ, ಸತ್ಕರ್ಮಾನುಷ್ಠಾನದಿಂದ ಷಣ್ಮುಖನಂತಿರುವ, ರೂಪದಿಂದ ಮನ್ಮಥನಂತಿರುವ, ಗುರುಗಳ ಅನುಗ್ರಹದಿಂದ ಆರುಣಿಯಂತಿರುವ ಮತ್ತು ವಿದ್ಯೆಯಿಂದ ಸಮುದ್ರದಂತೆ ಅಗಾಧರಾದ ಶ್ರೀನಿವಾಸಾಚಾರ್ಯರಿಗೆ ನಾನು ವಂದಿಸುವೆ.

ರಘೋರ್ಬಾಣಾಕಾರಾಭಿಧಪದಧರಶ್ರೀಪದಗಿರಃ
ಪಿತುಃ ಪದ್ಮಾಂಬಾಯಾಸ್ಸುಹೃದಯಜನನ್ಯಾಃ ಕರುಣಯಾ ॥
ಸುಚಾರ್ವಾಶೀರ್ವಾಚಾ ರುಚಿರರಚಿತಾಚಾರ್ಯಶತಕ -
ತ್ರಯೀ ಭೂಯಾತ್ಕಾಮಂ ಪ್ರಥಮಮಪಿ ರಾಮಪ್ರಿಯತಮಮ್ ॥ ೧೨೨ ॥

ಶ್ರೀ ರಾಮಚಂದ್ರದೇವರ ಬಾಣಾಕಾರ (ಬಾಳಗಾರು) ಎಂಬ ಕ್ಷೇತ್ರದ ಹೆಸರನ್ನು ಹೊಂದಿರುವ ಶ್ರೀನಿವಾಸಾಚಾರ್ಯರೆಂಬ ತಂದೆಗಳ ಹಾಗೂ ಒಳ್ಳೆಯ ಹೃದಯವುಳ್ಳ ಪದ್ಮಾಬಾಯಿ ಎಂಬ ನನ್ನ ತಾಯಿಯ ಕರುಣೆಯಿಂದ, ಸುಂದವಾದ ಆಶೀರ್ವಾದದ ವಾಕ್ಯಗಳಿಂದ ರುಚಿರನು ರಚಿಸಿದ ಈ ಆಚಾರ್ಯಶತಕತ್ರಯದಲ್ಲಿ ಪ್ರಥಮವಾದ ಕಥಾಶತಕವು ಶ್ರೀರಾಮಚಂದ್ರದೇವರಿಗೆ ಬಹಳ ಪ್ರಿಯತಮವಾಗಲಿ.

**ಇತಿ ರುಚಿರಾಚಾರ್ಯನಾಮಕೇನ ಬಾಲಕೇನ ರಚಿತೇ**
**ಆಚಾರ್ಯಶತಕತ್ರಯೇ ಪ್ರಥಮಂ**
**ಕಥಾಶತಕಮ್**



|| ಶ್ರೀಃ ||

|| ಶ್ರೀ ಗುರುರಾಜೋ ವಿಜಯತೇ ||

# ಆಚಾರಶತಕಮ್

ಆರಬ್ಧ ಮಧ್ವಮತಪಾಠಮಥೋ ಯತೀಂದ್ರೋ
ಹೃದ್ಯಾನವದ್ಯಶತಪದ್ಯಸುಧಾಪ್ರದಾಯ ||
ಗೋಷ್ಠ್ಯಾಂ ಸಮಸ್ತಮಹಿತಾಯ ನಿಜಾಶ್ರಿತಾಯ
ಪ್ರೇಷ್ಠಾಯ ಶಿಷ್ಟತಮಸಾತ್ವಿಕಾರಾಟ್‌ಸುತಾಯ || ೧ ||

ಅನಂತರದಲ್ಲಿ ಯತಿವರ್ಯರಾದ ಶ್ರೀ ಸತ್ಯಧ್ಯಾನತೀರ್ಥರು, ಸುಂದರವಾದ ದೋಷಗಳಿಲ್ಲದ ಶತಶ್ಲೋಕಗಳೆಂಬ ಅಮೃತವನ್ನು ನೀಡುವ ("ಘಟಿಕಾಯಾಂ ಶತಶ್ಲೋಕೀ" ಎಂಬ ಬಿರುದು ಹೊಂದಿದ) ಸಭೆಯಲ್ಲಿ ಎಲ್ಲರಿಂದ ಗೌರವಿತರಾದ, ತನ್ನನ್ನು ಆಶ್ರಯಿಸಿರುವ, ತಮಗೆ ಅಚ್ಚುಮೆಚ್ಚಾದ, ಉತ್ತಮಶಿಷ್ಯರಾದ ಶ್ರೀ ಸಾತ್ವಿಕಾಚಾರ್ಯರ ಪುತ್ರರಿಗೆ ಮಧ್ವಸಿದ್ಧಾಂತ ಪಾಠವನ್ನು ಪ್ರಾರಂಭ ಮಾಡಿದರು.

ಭಾಷ್ಯಪಾಠಮಪಿ ಸೋಽತ್ರ ಟೀಕಯಾ
ಪ್ರೋಲ್ಲಸದ್ವಿವಿಧಟಿಪ್ಪಣೀಕಯಾ ||
ಸನ್ನಿಶಮ್ಯ ನವಮಧ್ವತೋ ನವ -
ಶೋಭನೋಪಪದಭಟ್ಟವದ್ಬಭೌ || ೨ ||

ಇಲ್ಲಿ ಆ ಶ್ರೀನಿವಾಸಾಚಾರ್ಯರು ಶ್ರೀ ಸತ್ಯಧ್ಯಾನತೀರ್ಥರು ಅನುಗ್ರಹ ಮಾಡಿದ ಅನೇಕ ವಿಧ ಟಿಪ್ಪಣಿಗಳಿಂದ ಕಂಗೊಳಿಸುವ ಟೀಕಾದಿಂದ ಕೂಡಿರುವ ಶ್ರೀ ಬ್ರಹ್ಮಸೂತ್ರಭಾಷ್ಯದ ಪಾಠವನ್ನು ಶ್ರವಣಮಾಡಿದರು. ಆಗ ಅಭಿನವ ಆನಂದತೀರ್ಥರ ಸಮಕ್ಷಮದಲ್ಲಿ ಅಭಿನವ ಶೋಭನಭಟ್ಟರಂತೆ ಶ್ರೀನಿವಾಸಾಚಾರ್ಯರು ವಿರಾಜಿಸಿದರು.

ಮಿಥ್ಯಾಮತಚ್ಛಿದ್ಯತಿನಾಥ ಏಷಃ
ಮಿಥ್ಯಾಮತಿಂ ಮಾಠರಗೀರ್ಷು ತನ್ವನ್ ||
ಪ್ರೀತ್ಯಾನ್ವಗೃಹ್ಣಾತ್ ಗುರುರಾಜಪುತ್ರಂ
ಪ್ರೀತಿಸ್ತು ಸತ್ಯೇವ ಸತಾಂ ಹಿ ನಿತ್ಯಮ್ || ೩ ||

ಯತಿವರ್ಯರಾದ ಶ್ರೀಸತ್ಯಧ್ಯಾನತೀರ್ಥರು ಮಿಥ್ಯಾಮತವನ್ನು ಖಂಡಿಸುತ್ತಿದ್ದರೂ ಹಿಂದೆ ಶ್ರೀನಿವಾಸಾಚಾರ್ಯರ ಬಗ್ಗೆ ಕೋಪದಿಂದ ಕೆಲವು ಮಠೀಯರು ಮಾಡಿದ್ದ ಚಾಡಿಮಾತಿನಲ್ಲಿ

ಮಿಥ್ಯಾಮತಿಯನ್ನು ಇಟ್ಟರು. ಹಾಗೆಯೇ ಗುರುರಾಜಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರನ್ನು ಪ್ರೀತಿಯಿಂದ ಅನುಗ್ರಹ ಮಾಡಿದರು. ಸಜ್ಜನರಲ್ಲಿಯೇ ಸಜ್ಜನರ ಪ್ರೀತಿಯು ಶಾಶ್ವತವಾಗಿರುತ್ತದೆಯಷ್ಟೆ.

**ತತ್ರಾಥ ಪೂರ್ವೋತ್ತರಪಕ್ಷಪೂರ್ವಂ**
**ಸೂತ್ರಾಹಿಣಾ ಧೀಪದಮಂದರೇಣ ॥**
**ಶಾಸ್ತ್ರಾಂಬುಧಿಂ ಮಥ್ನತಿ ಸಾತ್ವಿಕೋತ್ಥೇ**
**ಧ್ಯಾನಾರ್ಯಧನ್ವಂತರಿರಾವಿರಾಸೀತ್ ॥ ೪ ॥**

ಅಲ್ಲಿ ಶ್ರೀಸಾತ್ವಿಕಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರು ತಮ್ಮ ಬುದ್ಧಿಯೆಂಬ ಮಂದರಪರ್ವತವನ್ನು ಬ್ರಹ್ಮಸೂತ್ರವೆಂಬ ವಾಸುಕಿಯಿಂದ (ಬಿಗಿದು) ಪೂರ್ವ ಉತ್ತರ ಪಕ್ಷಗಳ ಪೂರ್ವಕವಾಗಿ ಶಾಸ್ತ್ರವೆಂಬ ಸಮುದ್ರವನ್ನು ಕಡೆಯುವಾಗ (ಭಾಷ್ಯಾದಿಗ್ರಂಥಗಳ ಚಿಂತನೆ ನಡೆಸುತ್ತಿದ್ದಾಗ) ಶ್ರೀಸತ್ಯಧ್ಯಾನತೀರ್ಥರು ಧನ್ವಂತರಿಯಂತೆ ಆವಿರ್ಭೂತರಾದರು.

**ಶರೀರಿಣಾಂಚಾಮೃತತಾಪ್ರದಾನಾತ್**
**ಯಾ ದೇವದೇಹಾಮೃತಮತ್ಯಶೇತ ॥**
**ತಾಂ ಸರ್ವಪೃಥ್ವೀತ್ರಿದಿವೇಶಜೀವಾಂ**
**ಪ್ರಾದಾದಯಂ ನ್ಯಾಯಸುಧಾಂ ಬುಧಾಯ ॥ ೫ ॥**

ದೇವತೆಗಳ ದೇಹಕ್ಕೆ ಮಾತ್ರ ಅಮೃತ್ವವನ್ನು ನೀಡುವ ಅಮೃತವನ್ನು, ಎಲ್ಲ ದೇಹಿಗಳಿಗೆ ಅಮೃತತ್ವ ನೀಡುವುದರಿಂದ ಜಯಿಸಿರುವ, ಎಲ್ಲ ಭೂದೇವತೆಗಳಿಗೆ ಜೀವದಂತೆ ಇರುವ ಶ್ರೀಮನ್ನ್ಯಾಯಸುಧಾವನ್ನು ಈ ಸತ್ಯಧ್ಯಾನತೀರ್ಥರೆಂಬ ಧನ್ವಂತರಿಯು ಈ ಶ್ರೀನಿವಾಸಾಚಾರ್ಯರೆಂಬ ಭೂದೇವನಿಗೆ ನೀಡಿದನು.

**ಪಾತುಂ ಪ್ರವೃತ್ತೇ ಚ ಸುಧಾಂ ಬುಧೇಽಸ್ಮಿನ್**
**ತಾಂ ಹರ್ತುಕಾಮೇ ಕುಮತಾಸುರೌಘೇ ॥**
**ಧ್ಯಾನಾರ್ಯಹರ್ಯಾಕೃತಿರಾವಿರಾಸೀತ್**
**ವಾಣೀ ತದಾ ಸುಂದರಮೋಹಿನೀವ ॥ ೬ ॥**

ಈ ಶ್ರೀನಿವಾಸಾಚಾರ್ಯರೆಂಬ ದೇವನು ಆ ಅಮೃತವನ್ನು ಪಾನಮಾಡಲು ಪ್ರವೃತ್ತನಾಗುತ್ತಿದ್ದಂತೆ ದುರ್ಮತಗಳೆಂಬ ಅಸುರರು ಅದನ್ನು ಅಪಹರಿಸಲು (ನಾಶಮಾಡಲು) ಆಸೆ ಪಟ್ಟರು. ಆಗ ಧನ್ವಂತರಿ ರೂಪನಾದ ಶ್ರೀಹರಿಯು ಸುಂದರ ಮೋಹಿನೀರೂಪದಂತೆ ಶ್ರೀ ಸತ್ಯಧ್ಯಾನತೀರ್ಥರ ವಾಣಿಯು ಆವಿರ್ಭಾವ ಹೊಂದಿತು. (ಇಲ್ಲಿಂದ ೧೧ನೇ ಶ್ಲೋಕದವರೆಗೆ ಆದಿಕುಲಕ).

ಯಾ ಸುಂದರೀ ಬಂಧುರಪಾದಲೀಲಾ -
ವಿಲಾಸಸಮ್ಮೋಹಿತದುರ್ಮತೌಘಾ ||
ಸುವರ್ಣಪೂರ್ಣಾಭರಣೈರ್ವಿಭಾಂತೀ
ಸುಧಾಂ ಸುಧೀಡ್ಯಾಂ ಶಿರಸಾ ಧರಂತೀ || ೭ ||

ಆ ವಾಣಿಯು ಮೋಹಿನಿಯಂತೆ ಸುಂದರವಾಗಿದೆ. ಮೋಹಿನಿಯು ತನ್ನ ಭಾವತುಂಬಿದ ಹೆಜ್ಜೆಗಳ ಚೆಲ್ಲಾಟದಿಂದ ದುರ್ಮತಿಗಳಾದ ಅಸುರರ ಹಿಂಡನ್ನು ಮೋಹಿಸಿದಂತೆ ಆ ವಾಣಿಯೂ, ತನ್ನ ಭಾವಪೂರ್ಣವಾದ ಪದಗಳ ವಿಲಾಸದಿಂದ ಎಲ್ಲ ದುರ್ಮತಗಳನ್ನು ಮೋಹಗೊಳಿಸಿದೆ. ಮೋಹಿನಿಯು ಸುವರ್ಣಮಯವಾದ ಆಭರಣ (ಅಲಂಕಾರ)ಗಳಿಂದ ಕಂಗೊಳಿಸುತ್ತಾ ಅಮೃತವನ್ನು ಶಿರಸಾ ಧರಿಸಿದಂತೆ ಈ ವಾಣಿಯೂ ಸಹ ಸು-ಒಳ್ಳೆ ವರ್ಣಮಯವಾದ ಅಲಂಕಾರಗಳಿಂಧ ಕಂಗೊಳಿಸುತ್ತಾ, ಪಂಡಿತರಿಂದ ಸ್ತುತ್ಯವಾದ ಶ್ರೀನ್ಯಾಯಸುಧೆಯನ್ನು ಶಿರಸಾ ಧರಿಸಿದೆ

ಶ್ರೀಕೃಷ್ಣಸೂತ್ರಾಭಿಧನೀಲವಾಲಾ
ವಾತಾಗಮಪ್ರೋಲ್ಲಸಿತಾಸ್ಯಲೀಲಾ ||
ಜಯಾರ್ಯವಾಚಾಽಖಿಲಹೃಜ್ಜಯಂತೀ
ವ್ಯಾಸಾರ್ಯವಾಕ್ಚಂದ್ರಿಕಯಾ ಲಸಂತೀ || ೮ ||

ಈ ವಾಣಿಯೆಂಬ ಮೋಹಿನಿಗೆ ಶ್ರೀ ವೇದವ್ಯಾಸದೇವರ ಬ್ರಹ್ಮಸೂತ್ರಗಳೇ ನೀಲವಾದ ಕೇಶಗಳು. ವಾಯು ಪುತ್ರರಾದ ಶ್ರೀಮಧ್ವಾಚಾರ್ಯರ ಆಗಮವೆಂಬ ವಾಯುವಿನ ಆಗಮನದಿಂದ ಮುಖವು ಉಲ್ಲಾಸಮಯವಾಗಿದೆ. ಜಯಪ್ರದವಾದ ಶ್ರೀ ಜಯತೀರ್ಥರ ವಾಕ್ಯಗಳಿಂದ (ದೇವತೆಗಳ ಜಯಕಾರಗಳಿಂದ) ಎಲ್ಲರ ಹೃದಯವನ್ನು ಜಯಿಸುವ ಈ ವಾಣಿಯೆಂಬ ಮೋಹಿನಿಯು ಶ್ರೀ ವ್ಯಾಸರಾಜರ ಚಂದ್ರಿಕೆಯೆಂಬ ಬೆಳದಿಂಗಳಿಂದ ವಿರಾಜಿಸುತ್ತಿದ್ದಾಳೆ.

ಸದ್ವಾದಿರಾಜಾಭಿಧವರ್ಯವಿದ್ಯಾ -
ಧೀಶಾರ್ಯಜಾತಾಕೃತಿನೇತ್ರಯುಗ್ಮಾ ||
ಶ್ರೀರಾಘವೇಂದ್ರತ್ರಿದಶದ್ರುರಾಜ -
ದ್ವಾಕ್ಪಾರಿಜಾತೋತ್ಥಿತಗಂಧಹೃದ್ಯಾ || ೯ ||

ಶ್ರೀ ವಾದಿರಾಜತೀರ್ಥರು ಹಾಗೂ ವಿದ್ಯಾಧೀಶತೀರ್ಥರೆಂಬ ಹಿರಿಯರ 'ಗುರ್ವರ್ಥದೀಪಿಕಾ' 'ವಾಕ್ಯಾರ್ಥಚಂದ್ರಿಕಾ' ಎಂಬ ಕೃತಿಗಳು ಈ ಮೋಹಿನಿಯ ಕಣ್ಣುಗಳು. ಶ್ರೀ ರಾಘವೇಂದ್ರಸ್ವಾಮಿಗಳೆಂಬ ದೇವವೃಕ್ಷದಲ್ಲಿ ವಿರಾಜಿಸುವ ವಾಕ್ಯಗಳೆಂಬ ಪಾರಿಜಾತ ಪುಷ್ಪಗಳ ಪರಿಮಳದಿಂದ ಈ ವಾಣೀಮೋಹಿನಿಯು ಹೃದಯಂಗಮಳಾಗಿದ್ದಾಳೆ.

ಯಾ ಯಾದುಪತ್ಯಾಭಿಧಕಂಠಭೂಷಾ
ಕಾಶೀಯಕೌಶೇಯಧರಾಽತಿಕಮ್ರಾ ॥
ಅನೇಕವಿದ್ವತ್ಕೃತಿಪಾರಿಹಾರ್ಯ -
ಕೇಯೂರಮಂಜೀರವಿಭೂಷಿತಾಂಗೀ ॥ ೧೦ ॥

ಈ ಮೋಹಿನಿಗೆ 'ಯಾದುಪತ್ಯ'ವು ಕೊರಳಿಗೆ ಅಲಂಕಾರವಾದ ಹಾರ. 'ಕಾಶೀಯ' ವೆಂಬ ಉತ್ತಮ ರೇಶ್ಮೆಯ ಸೀರೆಯನ್ನು ಧರಿಸಿ ಬಹಳ ರಮಣೀಯಳಾದ ಇವಳ ಹಸ್ತಪಾದಾದಿ ಅವಯವಗಳಿಗೆ ಅನೇಕ ವಿದ್ವಾಂಸರ ಕೃತಿಗಳು, ಬಳೆ ಕೇಯೂರ ಗೆಜ್ಜೆ ಮೊದಲಾದ ಆಭರಣಗಳಾದವು.

ನ್ಯಾಯಾಮೃತಾಸ್ವಾದನಮತ್ತಚಿತ್ತಾ
ಸತ್ತರ್ಕರಂಗಸ್ಥಲತಾಂಡವಸ್ಥಾ ॥
ಸತ್ಸು ಪ್ರಸನ್ನಾಽಸುಜನೇಷು ಖಿನ್ನಾ
ಸದೈವ ವಿಶ್ವಾವನಿದೇವಸೇವ್ಯಾ ॥ ೧೧ ॥

ಆ ಮೋಹಿನಿಯು ನ್ಯಾಯಾಮೃತವೆಂಬ ಅಮೃತದ ಪಾನದಿಂದ ಆನಂದೋದ್ರೇಕಗೊಂಡ ಮನಸ್ಸಿನಿಂದ ಸತ್ತರ್ಕವೆಂಬ ರಂಗಮಂಟಪದಲ್ಲಿ ತಾಂಡವ ಮಾಡುತ್ತಿದ್ದಾಳೆ. ಸಜ್ಜನರಲ್ಲಿ ಪ್ರಸನ್ನಳಾಗಿದ್ದಾಳೆ. ನ್ಯಾಯಸುಧಾವನ್ನು ಅಪಹರಿಸಲೆತ್ನಿಸಿದ ಅಸಜ್ಜನರಲ್ಲಿ ಖಿನ್ನಳಾಗಿದ್ದಾಳೆ. ಎಲ್ಲ ಭೂದೇವತೆಗಳು ನಿತ್ಯವೂ ಇವಳನ್ನು ಸೇವಿಸುತಿದ್ದಾರೆ. (ಇಂತಹ ವಾಣೀಯೆಂಬ ಮೋಹಿನಿಯು ಆವಿರ್ಭಾವ ತಾಳಿದಳು).

ಏವಂ ನ್ಯಾಯಸುಧಾಂ ಸಮಸ್ತಮಹಿತಾಂ ವ್ಯಾಖ್ಯಾಶತೈಃ ಪೂರಿತಾಂ
ಸತ್ಯಧ್ಯಾನಯತೀಶ್ವರೇಣ ಕಥಿತಾಂ ಶ್ರೀಸಾತ್ವಿಕಾರ್ಯಾತ್ಮಜಃ ॥
ಭಕ್ತಿಜ್ಞಪ್ತಿವಿರಕ್ತಿತೋಯನಿಲಯಃ ಧ್ಯಾಯನ್ ಕೃತಾರ್ಥೋಽಭವತ್
ಲಕ್ಷ್ಮೀಶಾಶ್ರಮಿವರ್ಯಪೂರ್ವಶುಭದೃಗ್‌ಶೌರ್ಯೈಃ ಸತೀರ್ಥ್ಯೈರ್ಯುತಃ ॥ ೧೨ ॥

ಹೀಗೆ ಎಲ್ಲರಿಂದಲೂ ಗೌರವಿಸಲ್ಪಟ್ಟ ನೂರಾರು ವ್ಯಾಖ್ಯಾನವುಳ್ಳ ಶ್ರೀಮನ್ನ್ಯಾಯಸುಧೆಯನ್ನು ಶ್ರೀ ಸತ್ಯಧ್ಯಾನತೀರ್ಥರು ಉಪದೇಶಿಸಿದಾಗ, ಶ್ರೀಸಾತ್ವಿಕಾಚಾರ್ಯರ ಪುತ್ರರಾದ, ಭಕ್ತಿ ಜ್ಞಾನ ವಿರಕ್ತಿಗಳಿಗೆ ಸಮುದ್ರದಂತೆ ಇರುವ ಶ್ರೀನಿವಾಸಾಚಾರ್ಯರು ಶ್ರೀ ಲಕ್ಷ್ಮೀಶತೀರ್ಥರೆಂಬ ಯತಿವರ್ಯರೇ ಮೊದಲಾದ ಸತೀರ್ಥರಿಂದ ಸಹಿತರಾಗಿ ಅಭ್ಯಾಸಮಾಡುತ್ತ ಕೃತಾರ್ಥರಾದರು.

ಯೋ ವಿದ್ವನ್ಮಣಿಗಣದುರ್ಗಮಾರ್ಥಪೂರ್ಣಃ
ಶ್ರೀದ್ವೈತದ್ಯುಮಣಿಪದೋ ಮಣಿಃ ಕೃತೀನಾಮ್ ॥
ಅದ್ವೈತಾಂಧತಮಸಭಕ್ಷಣೈಕದೀಕ್ಷಃ
ತಂ ಪ್ರಾದಾದ್ಬುಧಮಣಯೇ ಮಣಿರ್ಯತೀನಾಮ್ ॥ ೧೩ ॥

ಉತ್ತಮ ವಿದ್ವಜ್ಜನರ ಮಂಡಲಿಯಿಂದ ಪೂರ್ಣಹೊಂದಲಾಗದ ಅರ್ಥಗಳಿಂದ ಪೂರ್ಣವಾದ, ಅದ್ವೈತವೆಂಬ ಅಂಧಂತಮಸ್ಸಿನ ನಾಶದಲ್ಲಿಯೇ ದೀಕ್ಷೆಯುಳ್ಳ ದ್ವೈತದ್ಯುಮಣಿ ಎಂಬ ಕೃತಿರತ್ನವನ್ನು, ಯತಿರತ್ನರಾದ ಶ್ರೀಸತ್ಯಧ್ಯಾನತೀರ್ಥರು ಪಂಡಿತರತ್ನರಾದ ಶ್ರೀನಿವಾಸಾಚಾರ್ಯರಿಗೆ ಉಪದೇಶ ನೀಡಿದರು.

**ಸಮಗ್ರಂ ತದ್ಗ್ರಂಥಂ ಗುರುವರಪದಾಂಭೋಜಸವಿಧೇ**
**ಪಠನ್ ಸಮ್ಯಕ್ ತನ್ವನ್ನನುವದನಮಸ್ಯಾತಿಕಠಿಣಮ್ ॥**
**ಯ ಏಕಃ ಪ್ರಾಕಾರ್ಷೀದಸದೃಶಮುದಂ ದೇಶಿಕಹೃದಃ**
**ಗುರೋಽಸ್ಮಿನ್ ಪ್ರೀತಿರ್ನ ಹಿ ಭವತಿ ಶಕ್ಯಾ ಕಥಯಿತುಮ್** ॥ ೧೪ ॥

ಶ್ರೇಷ್ಠ ಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರ ಪಾದಕಮಲದ ಸನಿಹದಲ್ಲಿ ಸಮಗ್ರವಾಗಿ ಆ ಗ್ರಂಥವನ್ನು ಓದಿ, ಅತಿಕಠಿಣವಾದ ಈ ಗ್ರಂಥದ ಪರಿಪೂರ್ಣ ಅನುವಾದವನ್ನು ನೇರವೇರಿಸಿ ಗುರುಗಳ ಹೃದಯಕ್ಕೆ ಅನುಪಮವಾದ ಆನಂದವನ್ನು ಇವರೊಬ್ಬರೇ ನೀಡಿದರು. ಇಂಥ ಶಿಷ್ಯನಲ್ಲಿ ಗುರುಗಳ ಪ್ರೀತಿಯು ಎಷ್ಟೆಂದು ಎಣಿಸಲು ಶಕ್ಯವಿಲ್ಲವಷ್ಟೆ.

**ಚಾತುರ್ಯಚಾರುತರವಾಗ್ಭೃತಸರ್ವಚೇತಾಃ**
**ನಿತ್ಯಂ ನಿಜಾಧ್ಯಯನತತ್ಪರಸಾಧುಚೇತಾಃ ॥**
**ವಾಕ್ಯಾರ್ಥಘೋರವಿಪಿನೇ ಮೃಗರಾಜತೇಜಾಃ**
**ರೇಜೇ ಮಠೇಽಖಿಲಪಟುರ್ಗುರುರಾಟ್ತನೂಜಃ** ॥ ೧೫ ॥

ಗುರುರಾಜಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರು ಚಾತುರ್ಯದಿಂದ ಬಹಳ ಚಾರುವಾದ ಮಾತುಗಳಿಂದ ಎಲ್ಲರ ಮನಸ್ಸನ್ನು ಸೂರೆಗೊಳ್ಳುತ್ತಿದ್ದರು. ಆದರೆ ಅವರ ಮನಸ್ಸು ನಿತ್ಯದಲ್ಲಿ ತಮ್ಮ ಅಧ್ಯಯನದಲ್ಲಿ ಆಸಕ್ತವಾಗಿರುತ್ತಿತ್ತು. ವಾಕ್ಯಾರ್ಥವೆಂಬ ಘೋರ ಅರಣ್ಯರಲ್ಲಿ ಅವರು ಮೃಗರಾಜನಾದ ಸಿಂಹನಂತೆ ಪರಾಕ್ರಮಿಯಾಗಿದ್ದರು. ಹೀಗೆ ಎಲ್ಲ ವಿಷಯಗಳಲ್ಲಿ ಅವರು ಚತುರರಾಗಿ ವಿರಾಜಿಸಿದರು.

**ಅಥ ಯತಿವರಶಿಷ್ಯೋ ವರ್ಯಧರ್ಮಾಧಿಕಾರೀ -**
**ಪದವರಲಸಿತೋಽಗಾದ್ಧೀರಕಂಠೀರವೋಽಯಮ್ ॥**
**ತಿರುಪತಿಗತಗೋಷ್ಠೀಂ ಮಂಡಿತಾಂ ಪಂಡಿತೇಂದ್ರೈಃ**
**ಕಠಿಣತರಪರೀಕ್ಷಾಘೋರಚರ್ಚಾದಿಯುಕ್ತಾಮ್** ॥ ೧೬ ॥

ಅನಂತರದಲ್ಲಿ ಯತಿವರ್ಯರಾದ ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯರಾದ ಈ ಶ್ರೀನಿವಾಸಾಚಾರ್ಯರೆಂಬ ಧೀರಸಿಂಹವು ಶ್ರೇಷ್ಠವಾದ ಧರ್ಮಾಧಿಕಾರೀ ಎಂಬ ಪದವಿಯಿಂದ

ವಿರಾಜಿಸುತ್ತ ತಿರುಪತಿಯಲ್ಲಿರುವ ಪಂಡಿತರಿಂದ ಮಂಡಿತವಾದ ಸಭೆಗೆ ತೆರಳಿತು. ಅಲ್ಲಿ ಕಠಿಣವಾದ ಪರೀಕ್ಷೆಗಳು ಘೋರ ವಾದಗಳು ನಡೆಯುತ್ತಿದ್ದವು.

**ಮಧ್ಯಸ್ಥೇ ವರಖೇಡಿಪಂಚವದನೇ ಪ್ರಾಮಾಣ್ಯವಾದಾಹವೇ**
**ವಿದ್ವಚ್ಛೇಖರಯಜ್ಞವಿಠ್ಠಲಮುಖ್ಯೈಃ ಪೂರ್ಣೇ ಸಮಿತ್ಯಂತರೇ ॥**
**ಆಯಾತೋ ಯಶಸಾ ತತೋಽತ್ರ ವಿಬುಧ್ಯೈಃ ಸಾರ್ಧಂ ನಿಯುಧ್ಯ ಪ್ರಧೀಃ**
**ಚಕ್ರವ್ಯೂಹಚರೋಽಭಿಮನ್ಯುರಿವ ತಾನ್ ಬುಧ್ಯಾತಿಶಿಶ್ಯೆ ಭೃಶಮ್** ॥ ೧೭ ॥

ಪ್ರಾಮಾಣ್ಯವಾದವೆಂಬ ಯುದ್ಧ ಪ್ರಾರಂಭವಾಗಿದೆ. ವರಖೇಡಿ ನರಸಿಂಹಾಚಾರ್ಯರು ಮಧ್ಯಸ್ಥರಾಗಿದ್ದಾರೆ. ಸಭೆಯ ಒಳಗೆಲ್ಲ ಯಜ್ಞವಿಠ್ಠಲಾಚಾರ್ಯರೇ ಮೊದಲಾದ ವಿದ್ವತ್ ಶಿರೋಮಣಿಗಳು ಸೇರಿದ್ದಾರೆ. ವಿಸ್ತಾರವಾದ ಯಶಸ್ಸುಳ್ಳ ಶ್ರೀನಿವಾಸಾಚಾರ್ಯರು ಇಲ್ಲಿ ಆಗಮಿಸಿ ಏಕಾಕಿಯಾಗಿ ಎಲ್ಲ ಪಂಡಿತರಿಂದ ನಿಯುದ್ಧ ಮಾಡಿದರು. ಹಾಗೂ ಚಕ್ರವ್ಯೂಹದಲ್ಲಿರುವ ಅಭಿಮನ್ಯುವಿನಂತೆ ಇವರು ಎಲ್ಲರನ್ನೂ ಬುದ್ಧಿಯಿಂದ ಮೀರಿಸಿಬಿಟ್ಟರು.

**ತರುಣಂ ಧರಣೀಸುರಾರುಣಾರ್ಕಂ**
**ಬುಧರಾಜಂ ಗುರುರಾಜಸೂನುರಾಜಮ್ ॥**
**ಬುಜಯೋಶ್ಚ ವಹನ್ನನರ್ತ ಚಿತ್ರಂ**
**ಪ್ರಮದೋದ್ರಿಕ್ತಸುಯಜ್ಞವಿಠ್ಠಲಾರ್ಯಃ** ॥ ೧೮ ॥

ಆಗ ತರುಣನಾದ ಸೂರ್ಯನಂತೆ ಕೆಂಪಾಗಿರುವ ಪಂಡಿತರಾಜರಾದ ಗುರುರಾಜಾಚಾರ್ಯರ ಹಿರಿಯ ಪುತ್ರರಾದ ಶ್ರೀನಿವಾಸಾಚಾರ್ಯರನ್ನು ಭುಜಗಳಲ್ಲಿ ಎತ್ತಿಕೊಂಡು ಯಜ್ಞವಿಠ್ಠಲಾಚಾರ್ಯರು ಆನಂದೋದ್ರೇಕದಿಂದ ಕುಣಿದಾಡಿದರು.

**ಕಿಮು ತಾದೃಶಶಿಷ್ಯಸಂಘತೋಽಸ್ಯ**
**ಗುರುರಾಜೋಽಪ್ಯುತ ತೇನ ತಸ್ಯ ಶೋಭಾ ॥**
**ಇತಿ ಲೌಕಿಕಲೋಚನೋತ್ಥಿತೋಽಯಂ**
**ವಿಶಯೋಽಭೂದುಭಯೋಶ್ಚ ಭೂಷಣಾಭಃ** ॥ ೧೯ ॥

ಹೀಗೆ ವಿಚಾರನಿರತರಾದ ಅಂಥ ಶಿಷ್ಯರ ವೃಂದದಿಂದ ಗುರುವರ್ಯರಾದ ಶ್ರೀ ಸತ್ಯಧ್ಯಾನತೀರ್ಥರಿಗೆ ಶೋಭೆಯೋ ? ಅಥವಾ ಆ ಗುರುವರ್ಯರಿಂದ ಈ ಶಿಷ್ಯರಿಗೆ ಶೋಭೆಯೋ ? ಎಂದು ಲೌಕಿಕರ ಕಂಗಳಲ್ಲಿ ಉಂಟಾದ ಸಂಶಯವು ಈ ಗುರುಶಿಷ್ಯರಿಬ್ಬರಿಗೂ ಅಲಂಕಾರವಾಯಿತು.

**ದಿಗಂತವಿಶ್ರಾಂತಬುಧ್ಯೈಶ್ಚ ಭವ್ಯಂ**
**ವಿಭೂಷಿತಂ ಮೌನಿವರೇಣ ದಿವ್ಯಮ್ ॥**

ಗತ್ವಾಽಥ ಬಳ್ಳಾರಿಗತಂ ಸದೋಽಯಮ್
ಗುರುಂ ನನಾಮಾತ್ರ ಸಮಸ್ತಸೇವ್ಯಮ್ ॥ ೨೦ ॥

ಅನಂತರದಲ್ಲಿ ದಿಗಂತವಾಗಿ ಪ್ರಸಿದ್ಧರಾದ ಪಂಡಿತರಿಂದ ಭವ್ಯವಾದ, ಯತಿವರ್ಯರಾದ ಶ್ರೀಸತ್ಯಧ್ಯಾನತೀರ್ಥರಿಂದ ಅಲಂಕೃತವಾದ, ಬಳ್ಳಾರಿಯಲ್ಲಿರುವ ದಿವ್ಯವಾದ ಸಭೆಗೆ ಶ್ರೀನಿವಾಸಾಚಾರ್ಯರು ಹೋಗಿ ಎಲ್ಲರಿಂದಲೂ ಸೇವಿತರಾದ ಗುರುಗಳಿಗೆ ನಮಿಸ್ಸಿದರು.

ತತ್ರಾಽಽಯಾಸೀನ್ನ್ಯಾಯಶಾಸ್ತ್ರೇಽತಿದಕ್ಷಃ
ವಿದ್ವದ್ವರ್ಯೋ ವೇಂಕಟಾರ್ಯಾಭಿಧಾನಃ ॥
ಯೋಽಯಂ ಛಾತ್ರಾಣಾಂ ಪಟುಃ ಪಾಂಡುರಂಗೀ -
ತ್ಯೇವಂ ಬಾಲ್ಯೇಽಸ್ತಾವಿ ವಿದ್ವದ್ವರೌಘ್ಯೈಃ ॥ ೨೧ ॥

ಅಲ್ಲಿ ನ್ಯಾಯಶಾಸ್ತ್ರದಲ್ಲಿ ಬಹಳ ದಕ್ಷರಾದ ಹಿರಿಯ ವಿದ್ವಾಂಸರಾದ ಪಾಂಡುರಂಗೀ ವೆಂಕಟರಮಣಾಚಾರ್ಯರು ಆಗಮಿಸಿದ್ದರು. ಶ್ರೇಷ್ಠ ಪಂಡಿತರ ಮಂಡಲಿಯಲ್ಲಿ ಅವರು ಬಾಲ್ಯದಲ್ಲಿ, "ಛಾತ್ರಾಣಾಂ ಪಟುಃ ಪಾಂಡುರಂಗೀ" ಅಂದರೇ "ಶಿಷ್ಯರಲ್ಲಿ (ವಿದ್ಯಾರ್ಥಿಗಳಲ್ಲಿ) ಪಾಂಡುರಂಗಿಯೇ" ಪಟುವಾಗಿದ್ದಾನೆ ಎಂದು ಗೌರವಿಸಲ್ಪಟ್ಟಿದ್ದರು.

ಗಂಗೇಶಾಭಂ ನವ್ಯತರ್ಕದ್ಯುನದ್ಯಾಂ
ವೃದ್ಧಂ ವಿದ್ವತ್ತಾವಯೋಭ್ಯಾಂ ಪ್ರಸಿದ್ಧಮ್ ॥
ಕರ್ಮಂದೀಶೋ ವೀಕ್ಷ್ಯ ತಂ ಚ ಪ್ರಹೃಷ್ಟ -
ಸ್ತದ್ವಾಕ್ಯಾರ್ಥಂ ಶ್ರೋತುಕಾಮೋ ಬಭೂವ ॥ ೨೨ ॥

ನವ್ಯ ನ್ಯಾಯಶಾಸ್ತ್ರವೆಂಬ ದೇವನದಿಯಾದ ಗಂಗೆಯಲ್ಲಿ ಗಂಗೇಶ (ಶಿವ-ಗಂಗೇಶೋಪಾಧ್ಯಾಯ) ನಂತೆ ಇರುವ, ಪಾಂಡಿತ್ಯದಿಂದ ಮತ್ತು ವಯೋಮಾನದಿಂದ ವೃದ್ಧರಾದ, ಪ್ರಸಿದ್ಧರಾದ ಅವರನ್ನು ನೋಡಿ ಯತಿವರ್ಯರಾದ ಶ್ರೀ ಸತ್ಯಧ್ಯಾನತೀರ್ಥರು ಆನಂದವುಳ್ಳವರಾಗಿ ಅವರ ವಾಕ್ಯಾರ್ಥವನ್ನು ಕೇಳಲು ಬಯಸಿದರು.

ವಾಕ್ಯಾರ್ಥೇ ಸ ಶ್ರೀನಿವಾಸಂ ಸಮರ್ಥಂ
ಮತ್ವಾಽಽಹೂಯ ಪ್ರಾಹ ತಂ ವೇಂಕಟಾರ್ಯಮ್ ॥
ಪಶ್ಯತ್ವೇತನ್ನವ್ಯಗೋರಾಜಲೀಲಾಂ
ನವ್ಯನ್ಯಾಯೇಽನಮ್ಯವಾಕ್ಯಾರ್ಥಭಂಗೀಮ್ ॥ ೨೩ ॥

ಆ ಸತ್ಯಧ್ಯಾನತೀರ್ಥರು ಇವರ ಜೊತೆಯಲ್ಲಿ ಪ್ರತಿಯಾಗಿ ವಾಕ್ಯಾರ್ಥ ಮಾಡಲು ಶ್ರೀನಿವಾಸಾಚಾರ್ಯರೇ ಸಮರ್ಥರೆಂದು ತಿಳಿದು, ಅವರನ್ನು ಕರೆದು, 'ನವೀನನ್ಯಾಯದಲ್ಲಿ

ಅದಮ್ಯವಾದ ವಾಕ್ಯಾರ್ಥ ಭಂಗಿಯುಳ್ಳ ಈ ಹೊಸ ಘೂಳಿಯ ಆಟವನ್ನು ನೋಡಿರೆಂದು' ಈ ವೆಂಕಟರಮಣಾಚಾರ್ಯರಿಗೆ ಹೇಳಿದರು.

ಹೇತ್ವಾಭಾಸಾನಾಂ ಚ ಸಾಮಾನ್ಯವಾದೇ
ಚರ್ಚಾರಂಭೇ ವೇಂಕಟಾಯಸ್ಸ್ವಿಷ್ಟಃ ||
ವಾಕ್ಯಾರ್ಥಂ ಸ್ವಂ ಸಂಪ್ರದಾಯಾಪ್ತರೀತ್ಯಾ
ಕುರ್ವನ್ ಸರ್ವಾನ್ ಹರ್ಷಿತಾನಾಶ್ವಕಾರ್ಷೀತ್ || ೨೪ ||

ಆಗ ಹೇತ್ವಾಭಾಸ ಸಾಮಾನ್ಯ ನಿರುಕ್ತಿಯಲ್ಲಿ ಚರ್ಚೆಯು ಪ್ರಾರಂಭವಾಯಿತು. ವೃದ್ಧರಾದ ವೆಂಕಟರಮಣಾಚಾರ್ಯರು ಸಾಂಪ್ರದಾಯಿಕ ರೀತಿಯಿಂದ ತಮ್ಮ ವಾಕ್ಯಾರ್ಥವನ್ನು ಮಾಡುತ್ತಾ ಶೀಘ್ರವಾಗಿ ಎಲ್ಲರಿಗೂ ಆನಂದ ನೀಡಿದರು.

ಮಧ್ಯಸ್ಥಶ್ರೀಧ್ಯಾನತೀರ್ಥಾರ್ಯವಾಚಾ
ತತ್ರ ಪ್ರಾಪ್ತಾನೇಕನವ್ಯಾರ್ಥಸಾರಃ ||
ತದ್ವಾಕ್ಯಾರ್ಥಂ ಸ್ವೀಯಕೋಟಿಕ್ರಮೌಘೈಃ
ನವ್ಯೋ ರೇಜೇ ದೂಷಯನ್ ಧ್ಯಾನಶಿಷ್ಯಃ || ೨೫ ||

ಶ್ರೀ ಸತ್ಯಧ್ಯಾನತೀರ್ಥರು ಅಲ್ಲಿ ಮಧ್ಯಸ್ಥರಾಗಿದ್ದರು. ವೆಂಕಟರಮಣಾಚಾರ್ಯರ ವಾಕ್ಯಾರ್ಥದನಂತರ ಮಧ್ಯದಲ್ಲಿ ಶ್ರೀ ಸತ್ಯಧ್ಯಾನತೀರ್ಥರು ಪೂರ್ವಾಪರಗಳ ಅನುವಾದವನ್ನು ಮಾಡುತ್ತಿದ್ದರು. ಆಗ ಅವರ ಮಾತಿನಿಂದ ಸೂಚಿತವಾದ ಹೊಸ ಹೊಸ ಅನೇಕ ಅರ್ಥಗಳನ್ನು ಗ್ರಹಿಸುತ್ತ ತಮ್ಮ ಕೋಟಿಕ್ರಮಗಳಿಂದ ಆ ವೆಂಕಟರಮಣಾಚಾರ್ಯರ ವಾಕ್ಯಾರ್ಥವನ್ನು ದೂಷಿಸುತ್ತ ಶ್ರೀಸತ್ಯಧ್ಯಾನತೀರ್ಥರ ಶಿಷ್ಯರಾದ ಶ್ರೀನಿವಾಸಾಚಾರ್ಯರು ಶೋಭಿಸಿದರು.

ನವ್ಯಾನೇತತ್ಕೋಟಿಸಂಘಾನ್ ಸ್ವಭಂಗ್ಯಾ
ವೃದ್ಧೋಽಪ್ಯದ್ಧಾ ದೂಷಯತ್ಯೇಷ ಆಶು ||
ಕಾಶೀಯಾವಚ್ಛೇದಕಾಚ್ಛೇದ್ಯಕೋಟಿ -
ಸಂಘೈಸ್ಸ್ವೀಯಂ ನವ್ಯವಾದಂ ರರಕ್ಷ || ೨೬ ||

ಹೊಸತರನಾದ ಈ ಕೋಟಿಕ್ರಮಗಳನ್ನು ತಮ್ಮ ಸಾಂಪ್ರದಾಯಿಕ ರೀತಿಯಿಂದ ವೃದ್ಧರಾದ ಶ್ರೀ ವೆಂಕಟರಮಣಾಚಾರ್ಯರು ಚೆನ್ನಾಗಿ ದೂಷಿಸಿದಾಗ, ಈ ಶ್ರೀನಿವಾಸಾಚಾರ್ಯರು ಕಾಶೀ ಮೊದಲಾದ ಉತ್ತರದೇಶದ ಅವಚ್ಛೇದಕಗಳಿಂದ ಅಚ್ಛೇದ್ಯವಾದ ಕೋಟಿಕ್ರಮಗಳಿಂದ ತಮ್ಮ ಹೊಸವಾದವನ್ನು ರಕ್ಷಿಸುತ್ತಿದ್ದರು.

ಏವಂ ವೃತ್ತೇ ವಾದಯುದ್ಧೇಽಥ ಶಾಂತಃ
ಶಿಷ್ಟಶ್ರೇಷ್ಠ ಸ್ಸಸ್ಥವಿಷ್ಠೋಽತಿಹೃಷ್ಟಃ ||
ಅಶ್ಲೀಷ್ಯೈನಂ ಭಾಷಿಣಂ ಧ್ಯಾನಶಿಷ್ಯಂ
ಸ್ಪಷ್ಟಂ ಕೃಷ್ಟಿಶ್ರೇಷ್ಠಮಸ್ತೋಷ್ಟ ಗೋಷ್ಠ್ಯಾಮ್ || ೨೭ ||

ಹೀಗೆ ಏಷು ಪೊತ್ತಿನವರೆಗೆ ವಾದ ಯುದ್ಧವು ನಡೆಯುತ್ತಿದ್ದಾಗ, ಬಳಲಿದಂಥ ವೃದ್ಧರಾದ ಬಹುಶಿಷ್ಯರಾದ ಆ ವೆಂಕಟರಮಣಾಚಾರ್ಯರು ಬಹಳ ಸಂತೋಷದಿಂದ, ಅನುವಾದಮಾಡುತ್ತಿದ್ದ ಶ್ರೀ ಸತ್ಯಧ್ಯಾನತೀರ್ಥರ ಈ ಶ್ರಿಷ್ಯನನ್ನು ಪಂಡಿತರಲ್ಲಿ ಶ್ರೇಷ್ಠನೆಂದು ಸ್ಪಷ್ಟವಾಗಿ ಕೊಂಡಾಡುತ್ತ ಅಪ್ಪಿಕೊಂಡರು.

ನೂನಂ ನೂತ್ನೋಽಪ್ಯೇಷ ಗೋರಾಟ್ ಬಲಿಷ್ಠಃ
ಭಾಷಾ ಯಸ್ಯ ಶ್ರೋತೃಭೂಷಾಯಿತಾಽತ್ರ ||
ಏವಂ ಧ್ಯಾನಾರ್ಯಾಂತಿಕೇ ಶಂಸಿತೋಽಯಂ
ರೇಜೇ ಕೃಷ್ಟೀನಾಂ ಪಟುರ್ಜಾಲಿಹಾಳಃ || ೨೮ ||

"ನಿಜವಾಗಿಯೂ ಈ ಘೂಳಿಯು ಕಿರಿಯದಾಗಿದ್ದರೂ ಪ್ರಬಲವಾಗಿದೆ. ಇವರ ಮಾತುಗಳು ಕವಿಗಳಿಗೆ ಅಲಂಕಾರ ಪ್ರಾಯವಾಗಿವೆ." ಎಂದು ಶ್ರೀಸತ್ಯಧ್ಯಾನತೀರ್ಥರ ಸಮಕ್ಷಮದಲ್ಲಿ ವೆಂಕಟರಮಣಾಚಾರ್ಯರಿಂದ ಸ್ತುತ್ಯರಾದ ಶ್ರೀನಿವಾಸಾಚಾರ್ಯರು "ಪಂಡಿತರಲ್ಲಿ ಜಾಲಿಹಾಳನೇ ಪಟು" ಎಂಬಂತೆ ವಿರಾಜಿಸಿದರು.

ಧ್ಯಾನಾರ್ಯನಿರ್ಮಲಪದಾಮರವರ್ತ್ಮಚಾರಿ -
ಶ್ರೀಸಾತ್ವಿಕಾರ್ಯತನಯಾರ್ಯನವಾರ್ಕಭಾಸಾ ||
ದೀಪೋಪಮೇಯವಿದುಷಾಂ ಭೃಶಮಾಪ ನಾಶಂ
ರೀಢಾಖ್ಯಗಾಢತಿಮಿರಂ ಪರಿತೋಽಧರಸ್ಥಮ್ || ೨೯ ||

ಹೀಗೆ ಶ್ರೀಸತ್ಯಧ್ಯಾನತೀರ್ಥರ ನಿರ್ಮಲವಾದ ಪಾದಗಳೆಂಬ ಆಕಾಶದಲ್ಲಿ ಸಂಚರಿಸುವ ಶ್ರೀ ಸಾತ್ವಿಕಾಚಾರ್ಯರ ಹಿರಿಯ ಪುತ್ರರಾದ ಶ್ರೀನಿವಾಸಾಚಾರ್ಯರೆಂಬ ಸೂರ್ಯನ ಕಾಂತಿಯಿಂದ, ದೀಪದಂತಿರುವ ಇತರ ಪಂಡಿತರ ಒಳಗೆ, ಸುತ್ತಲೂ ಇರುವ ತಿರಸ್ಕಾರವೆಂಬ ಗಾಢಕತ್ತಲೆಯು ಪೂರ್ಣವಾಗಿ ನಾಶವಾಯಿತು. (ಉಪೇಕ್ಷಿಸುತ್ತಿದ್ದ ಹಲವು ಪಂಡಿತರೂ ಸಹ ಇವರನ್ನು ಪುರಸ್ಕರಿಸಿದರು ಎಂದು ಭಾವ).

ಪಠನ್ನಥ ಚ ಪಾಠಯನ್ ವಿಮಲಸರ್ವಮೂಲಂ ಶುಭಂ
ಪರೋಕ್ತಿಮಪಿ ದೂಷಯನ್ ಸುಖಮುನಿಂ ಚ ಸಂತೋಷಯನ್ ||

**ವಸೇತಿ ಗುರುಣೋದಿತಃ ಕ್ರತುಪುರಂ ಸ ಜೋಷೀದ್ವಿಜ -**
**ಮನೋರಥಗತೋ ಯಯೌ ಗುರುಕರಾತಪತ್ರೀ ಬುಧಃ** || ೩೦ ||

ಅನಂತರ ಗುರುಗಳಾದ ಶ್ರೀಸತ್ಯಧ್ಯಾನತೀರ್ಥರು "ನಿರ್ಮಲವಾದ ಸರ್ವಮೂಲವನ್ನು ಪಠಿಸುತ್ತ, ಹಾಗು ಪಾಠಮಾಡುತ್ತ, ಪರವಾದವನ್ನು ದೂಷಿಸುತ್ತ, ಶ್ರೀಮದಾಚಾರ್ಯರನ್ನು ಸಂತೋಷಪಡಿಸುತ್ತ ವಾಸಮಾಡು" ಎಂದು ಆದೇಶಿಸಿದಾಗ ಆ ಶ್ರೀನಿವಾಸಾಚಾರ್ಯರು ಗುರುಗಳ ಅಭಯಹಸ್ತವೆಂಬ ಛತ್ರದ ಅಡಿಯಲ್ಲಿರುವವರಾಗಿ ಜೋಷೀ ಗುರುರಾಜಾಚಾರ್ಯರ ಮನೋರಥವನ್ನು ಆಶ್ರಯಿಸಿ ಗದುಗಿಗೆ ನಡೆದರು.

**ಮಧ್ವಾರ್ಯೋದಿತವರ್ತ್ಮನೈವ ಸತತಂ ವಸ್ತವ್ಯಮಿತ್ಥಂ ಗುರೋ -**
**ರಾದೇಶಂ ಶಿರಸಾ ಧರನ್ ಬುಧವರಃ ಶಿಷ್ಯಾನಯಂ ಪಾಠಯನ್ ||**
**ಪಿತ್ರಾದ್ಯೈಃ ಸಹಿತೋ ವಸನ್ ಕ್ರತುಪುರೇ ಶ್ರೀವೀರನಾರಾಯಣಂ**
**ನಿತ್ಯಂ ಸ್ವೋಚಿತಕರ್ಮಣಾಭಜತ ಸದ್ಗಾರ್ಹಸ್ಥ್ಯಧರ್ಮಸ್ಥಿತಃ** || ೩೧ ||

ಶ್ರೀ ಮಧ್ವಾಚಾರ್ಯರು ಹೇಳಿದ ಮಾರ್ಗದಿಂದಲೇ ನಿತ್ಯವೂ ಜೀವಿಸಬೇಕೆಂದು ಗುರುಗಳು ನೀಡಿದ ಆದೇಶವನ್ನು, ಪಂಡಿತರಾಜರಾದ ಶ್ರೀನಿವಾಸಾಚಾರ್ಯರು ಶಿರಸಾ ಧರಿಸುತ್ತ, ಶಿಷ್ಯರಿಗೆ ಪಾಠಹೇಳುತ್ತ, ತಂದೆಗಳೇ ಮೊದಲಾದವರಿಂದ ಕೂಡಿಕೊಂಡು ಗದುಗಿನಲ್ಲಿ ವಾಸಮಾಡುತ್ತ, ನಿತ್ಯದಲ್ಲಿಯೂ ತಮಗೆ ಉಚಿತವಾದ ಅನುಷ್ಠಾನದಿಂದ ಒಳ್ಳೆಯ ಗ್ರಹಸ್ಥಧರ್ಮನಿಷ್ಠರಾಗಿ ಶ್ರೀವೀರನಾರಾಯಣನನ್ನು ಸೇವಿಸಿದರು.

**ಬ್ರಾಹ್ಮೇ ಮುಹೂರ್ತೇ ಮಾರ್ತಾಂಡಸಾರಥೇರುದಯಾತ್ಪುರಾ ||**
**ಕರ್ತವ್ಯಂ ಕರ್ತುಮುತ್ತಸ್ಥೌ ಸೂರವತ್ ಪ್ರತಿವಾಸರಮ್** || ೩೨ ||

ಬ್ರಾಹ್ಮಮುಹೂರ್ತದಲ್ಲಿ ಸೂರ್ಯನ ಸಾರಥಿಯಾದ ಅರುಣನು ಉದಯಿಸುವುದಕ್ಕಿಂತ ಮುಂಚಿತವಾಗಿ ಶ್ರೀನಿವಾಸಾಚಾರ್ಯರು ಕರ್ತವ್ಯ ಕಾರ್ಯಗಳನ್ನು ನಿರ್ವಹಿಸಲು ಸೂರ್ಯನಂತೆ ಪ್ರತಿದಿವಸವೂ ಏಳುತ್ತಿದ್ದರು.

**ಅಸ್ವಪ್ನೇಶಂ ಸ್ಮರನ್ನೇಷಃ ಸುಸ್ವಪ್ನೋಲ್ಲಸಿತಾನನಃ ||**
**ವಿಧೀನ್ ವಿಧಾಯ ವಿಧಿವದ್ವಿಧುವಚ್ಛುಶುಭೇಽನಘಃ** || ೩೩ ||

ಸ್ವಪ್ನವನ್ನೇ ಕಾಣದ ದೇವತೆಗಳಿಗೆ ಒಡೆಯನಾದ ಶ್ರೀಹರಿಯನ್ನು ಚಿಂತಿಸುತ್ತ ಒಳ್ಳೆ ಸ್ವಪ್ನದಿಂದ ಉಲ್ಲಾಸಗೊಂಡ ಮುಖವುಳ್ಳ ಈ ಶ್ರೀನಿವಾಸಾಚಾರ್ಯರು ವಿಧಿವತ್ತಾಗಿ ಎಲ್ಲ ವಿಧಿಗಳನ್ನು ಪೂರ್ಣಗೊಳಿಸಿ ನಿರ್ಮಲರಾಗಿ ಚಂದ್ರನಂತೆ ಕಂಗೊಳಿಸಿದರು.

ತುಲಸೀಮೃತ್ತಿಕಾಧೂಲಿವಿಲಸದ್ವಿತತಾಲಿಕಃ ॥
ನತ್ವಾ ಮಾತರಪಿತರೌ ಕೋಷ್ಠ ಆಸಿಷ್ಟ ದೈವತೇ ॥ ೩೪ ॥

ಅವರು ತುಳಸೀ ಮೃತ್ತಿಕೆಯ ಧೂಳಿಯಿಂದ ವಿಸ್ತಾರವಾದ ತಮ್ಮ ಹಣೆಯನ್ನು ಅಲಂಕರಿಸಿಕೊಂಡು, ತಂದೆತಾಯಿಗಳಿಗೆ ನಮಿಸಿ, ದೇವರ ಕೋಣೆಯಲ್ಲಿ ಕುಳಿತುಕೊಳ್ಳುತ್ತಿದ್ದರು.

ಕಾಯವಾಙ್ಮನಸೈಃ ಶ್ರೀಶಂ ದಶಧೀಶಮಯಂ ನಮನ್ ॥
ದಧ್ಯೌ ನಾರಾಯಣಂ ದೇವಂ ಜಗದ್ಧಾರಣಕಾರಣಮ್ ॥ ೩೫ ॥

ದೇಹದಿಂದ ವಾಕ್ಯಗಳಿಂದ ಹಾಗು ಮನಸ್ಸಿನಿಂದಲೂ ಪೂರ್ಣಪ್ರಜ್ಞಾಚಾರ್ಯರಿಗೆ ಒಡೆಯನಾದ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ನಮಸ್ಕರಿಸಿ, ಜಗತ್ತಿನ ಪೋಷಣೆಯನ್ನು ನಡೆಸುವ ಶ್ರೀ ನಾರಾಯಣದೇವರನ್ನು ಧ್ಯಾನಿಸುತ್ತಿದ್ದರು.

ಸಮಾನಮನುಸಂಧಾತುರಮಾನೇನಾನನೌಜಸಾ ॥
ಧಾಮಾಽಽಸಾವಾಚ್ಯಮೋದಸ್ಯ ಕಾಮಮೀಕ್ಷಕಮಾನಸಮ್ ॥ ೩೬ ॥

ಪ್ರಮಾಣಾನುಗುಣವಾಗಿ ಧ್ಯಾನಮಾಡುವ ಆ ಶ್ರೀನಿವಾಸಾಚಾರ್ಯರ ಅಸದೃಶವಾದ ಮುಖದ ಕಾಂತಿಯಿಂದ ನೋಡುಗರ ಮನಸ್ಸು ಬಣ್ಣಿಸಲಾಗದ ಅದ್ಭುತ ಆನಂದಕ್ಕೆ ನೆಲೆಯಾಗುತ್ತಿತ್ತು.

ಭಕ್ತಿಸಂತುಷ್ಟವೈಕುಂಠಃ ಪಟುರ್ಸ್ತುತ್ವಾಥ ಸುಷ್ಠು ಸಃ ॥
ಅಪಾರಕೀರ್ತ್ಯಕೂಪಾರರೂಪಾಂ ಗುರುಪರಂಪರಾಮ್ ॥ ೩೭ ॥

ಆನಂತರ ಭಕ್ತಿಯಿಂದ ಪರಮಾತ್ಮನನ್ನು ಸಂಪ್ರೀತಿಗೊಳಿಸಿದ ಚತುರರಾದ ಈ ಆಚಾರ್ಯರು ಅಪಾರವಾದ ಕೀರ್ತಿಯಿಂದ ಸಮುದ್ರದಂತಿರುವ ಗುರುಪರಂಪರೆಯನ್ನು ಚೆನ್ನಾಗಿ ಸ್ತೋತ್ರ ಮಾಡುತ್ತಿದ್ದರು.

ಗೀರ್ವಾಣವಾಣೀಸರಣಿಸ್ತುತದೇಶಿಕಸನ್ಮಣಿಃ ॥
ಜಗೌ ದಾಸಾಗ್ರಣೀವಾಣೀಂ ಧರಣೀಪುಣ್ಯಕಾರಿಣೀಮ್ ॥ ೩೮ ॥

ಈ ಶ್ರೀನಿವಾಸಾಚಾರ್ಯರು ದೇವವಾಣಿಯಾದ ಸಂಸ್ಕೃತದ ಸರಣಿಯಿಂದ ಗುರಪರಂಪರೆಯನ್ನು ಸ್ತುತಿಸಿದ ಮೇಲೆ ದಾಸವರ್ಯರು ರಚಿಸಿರುವ ಭೂಮಂಡಲವನ್ನು ಪವಿತ್ರಗೊಳಿಸುವ ಹಾಡುಗಳನ್ನು ಹಾಡುತ್ತಿದ್ದರು.

ತಂಬೂರೀಧಾರಿವಿಪ್ರಾರ್ಯಃ ಷಡ್ಜಪಂಚಮುಸುಸ್ವರೌ ॥
ಯೋಜಯನ್ ವಾದಯನ್ ರೇಜೇ ತುಂಬರೋಽಂಬರಗೋ ಯಥಾ ॥ ೩೯ ॥

ಬ್ರಾಹ್ಮಣೋತ್ತಮರಾದ ಆ ಶ್ರೀನಿವಾಸಾಚಾರ್ಯರು ತಂಬೂರಿಯನ್ನು ಧರಿಸುತ್ತಾ ಷಡ್ಜ ಪಂಚಮ ಸ್ವರಗಳನ್ನು ಹೊಂದಿಸಿ ಬಾರಿಸುತ್ತಿದ್ದಾಗ ಅಕಾಶದಲ್ಲಿ ಪ್ರಕಾಶಮಾನರಾದ ತುಂಬುರುರಂತೆ (ಭೂಮಿಯಲ್ಲಿ) ವಿರಾಜಿಸಿದರು.

**ವಿರಾಗೀ ಭಕ್ತಿಯೋಗಾಪ್ತರಾಗರಂಜಿತವಿಗ್ರಹಃ ||**
**ರಾಗಾಲಾಪಮಥೈಕಾಂತೇಽಕೃತ ಶ್ರೀಕಾಂತಗಾಂತರಃ || ೪೦ ||**

ತಂಬೂರಿಯ ಸ್ವರವನ್ನು ಹೊಂದಿಸಿದ ಮೇಲೆ ಅವರು ವಿರಾಗಿಯಾಗಿದ್ದರೂ ಭಕ್ತಿಯೋಗದಿಂದ ಕೆಂಪಾದ ದೇಹವುಳ್ಳವರಾಗಿ ಏಕಾಂತದಲ್ಲಿ ಶ್ರೀಕಾಂತನ ಮೇಲೆ ಮನಸ್ಸಿಟ್ಟು ರಾಗಗಳ ಆಲಾಪವನ್ನು ಮಾಡುತ್ತಿದ್ದರು.

**ಆಲಪನ್ ಮಧುರಂ ರಾಗಾನ್ ಸತಾಲಂ ಭೈರವಾದಿಕಾನ್ ||**
**ದಿವ್ಯಸ್ವಾನೋ ಮನಸ್ಸಾರ್ವಂ ಚಕರ್ಷೇತಿ ನ ಚಿತ್ರತಿ || ೪೧ ||**

ತಾಳಬದ್ಧವಾಗಿ ಭೈರವ ಮೊದಲಾದ ರಾಗಗಳನ್ನು ಮಧುರವಾಗಿ ಆಲಾಪ ಮಾಡುವ ಆ ಶ್ರೀನಿವಾಸಾಚಾರ್ಯರು ದಿವ್ಯವಾದ ಕಂಠಸಿರಿಯುಳ್ಳವರಾದ್ದರಿಂದ ಎಲ್ಲರ ಮನಸ್ಸನ್ನು ಆಕರ್ಷಿಸುತ್ತಿದ್ದರೆಂಬುದು ಆಶ್ಚರ್ಯವೇನಲ್ಲ.

**ಮಂದ್ರಮಧ್ಯಮತಾರೈಶ್ಚ ಗಾಯನ್ ಲಯವಿಲಾಸವಾನ್ ||**
**ನಾದಾತ್ಮಾನಮುಪಾಸಿಷ್ಟ ಸ ತಾನಾದಿಕಲಾನಿಧಿಃ || ೪೨ ||**

ಮಂದ್ರ ಮಧ್ಯ - ತಾರ ಎಂಬ ಮೂರು ಸಪ್ತಕಗಳಲ್ಲಿ ಹಾಡುತ್ತ, ಲಯದಲ್ಲಿ ಆಟವಾಡುತ್ತ, ತಾನ ಮೊದಲಾದ ಕಲೆಗಳ ಖನಿಯಾದ ಅವರು ನಾದರೂಪಿಯಾದ ಪರಮಾತ್ಮನನ್ನು ಉಪಾಸಿಸುತ್ತಿದ್ದರು.

**ಭಕ್ತ್ಯಾಽನನ್ಯಹೃದಾ ಗಾಯನ್ ಗಿರಃ ಪೌರಂದರಾದಿಕಾಃ ||**
**ಗಂಧರ್ವ ಇವ ಸೋಽದೇವೀತ್ ಪ್ರೀತಗಂಧರ್ವಕಂಧರಃ || ೪೩ ||**

ಇತರ ವಿಷಯದಲ್ಲಿ ಸಂಚರಿಸದ ಹೃದಯದಿಂದ ಭಕ್ತಿಯಿಂದ ಪುರಂದರದಾಸರೇ ಮೊದಲಾದವರ ಹಾಡುಗಳನ್ನು ಹಾಡುತ್ತಿದ್ದ ಅವರು ಗಂಧರ್ವನಂತೆ ಹಯವದನನಾದ ಪರಮಾತ್ಮನನ್ನು ಸಂತೋಷಪಡಿಸುತ್ತಾ ಶೋಭಿಸಿದರು.

**ಸಾಂಗವೇದೋತ್ತಮಾಂಗೋಕ್ತಮಂಗಲಾರ್ಥಂ ಗವೇಷಯನ್ ||**
**ಹೃದ್ಯಾನವದ್ಯ ಪದ್ಯಂ ಸ ಜಗೌ ರಂಗಾಂತರಂಗವಾನ್ || ೪೪ ||**

ಅಂಗ ಶಾಸ್ತ್ರಗಳಿಂದ ಸಹಿತವಾದ ವೇದ ಶಿರಸ್ಸಾದ ಉಪನಿಷತ್ತಿನ ಮಂಗಲಕರವಾದ ಅರ್ಥಗಳನ್ನು, ಸುಂದರವಾದ ನಿರ್ದುಷ್ಟವಾದ ಈ ಹಾಡುಗಳಲ್ಲಿ ಹುಡುಕುತ್ತ ಅವರು ಶ್ರೀರಂಗನಲ್ಲಿ ಅಂತರಂಗವನ್ನಿಟ್ಟು ಹಾಡುತ್ತಿದ್ದರು.

**ಜೈಜೈವಂತೀವಸಂತಾದಿರಾಗಸಂಘಾನುರಾಗವಾನ್ ॥**
**ರಂಗೇಽರ್ಪಯನ್ ಗಾನವಿದ್ಯಾಂ ಧನ್ಯತಾಮನಯತ್ತದಾ** ॥ ೪೫ ॥

'ಜೈಜೈವಂತಿ' 'ವಸಂತ' ಮೊದಲಾದ ರಾಗಗಳಲ್ಲಿ ಬಹಳ ಅನುರಾಗವುಳ್ಳ ಅವರು ಹೀಗೆ ತಮ್ಮ ಗಾನವಿದ್ಯೆಯನ್ನು ರಂಗನಾಥನಲ್ಲಿ ಅರ್ಪಿಸುತ್ತ ಅದನ್ನು ಸಾರ್ಥಕಗೊಳಿಸುತ್ತಿದ್ದರು.

**ಗಾಂಧಾರಂ ಪಂಚಮಂ ತಾರಂ ಮಧುರಂ ಭೈರವೀಸ್ವರಮ್ ॥**
**ಗಾಯನ್ ಗಾನೋಪಸಂಹಾರಂ ವಿಧತ್ತೇ ಸ್ಮ ಬುಧಸ್ಸದಾ** ॥ ೪೬ ॥

ಈ ಪಂಡಿತರಾದ ಶ್ರೀನಿವಾಸಾಚಾರ್ಯರು ಪ್ರತಿನಿತ್ಯವೂ ಗಾಂಧಾರ ಹಾಗು ಪಂಚಮ ಎಂಬ ಮಧುರವಾದ ಭೈರವೀರಾಗದ ಸ್ವರಗಳನ್ನು ಉಚ್ಚವಾಗಿ ಹಾಡುತ್ತ ಗಾಯನದ ಉಪಸಂಹಾರವನ್ನು ಮಾಡುತ್ತಿದ್ದರು.

**ಅನೇಕಘಟಿಕಂ ಗಾನತಟನೀಘಟಕಃ ಪಟುಃ ॥**
**ಸ್ವಾನಂದನಿರ್ಭರೋಽಭಾಸೀದ್ಧಯಾಸ್ಯವ್ಯಾಸಮಾನಸಃ** ॥ ೪೭ ॥

ಹೀಗೆ ಚತುರರಾದ ಅವರು ಬಹಳ ಘಳಿಗೆಗಳವರೆಗೆ ಗಾಯನವೆಂಬ ನದಿಯಲ್ಲಿ ಇರುವವರಾಗಿ 'ಹಯವದನವ್ಯಾಸ'ನಲ್ಲಿ ಮನಸ್ಸಿಟ್ಟು ತಮ್ಮ ಆನಂದದಿಂದ ತುಂಬಿತುಳುಕುತ್ತಾ ಕಂಗೊಳಿಸುತ್ತಿದ್ದರು.

**ಗಾನಶ್ರುತ್ಯಾಪ್ತಸುಪ್ತೀನಾಮುತ್ಥಾನಾಮಪ್ಯಥೋತ್ಥಿತೇಃ ॥**
**ಕಾದಾಚಿತ್ಕತ್ವಮತ್ರಾಸೀನ್ನೂನಮಾತ್ಮಾಶ್ರಯಾಶ್ರಯಃ** ॥ ೪೮ ॥

ಹೀಗೆ ಅದ್ಭುತವಾದ ಇವರ ಗಾನವನ್ನು ಕೇಳುವುದರಿಂದ ಎಚ್ಚರಗೊಂಡು ಎದ್ದರವರೆಲ್ಲರೂ ಮತ್ತೆ ನಿದ್ದೆಹೊಂದುತ್ತಿದ್ದರು. ಗಾಯನ ಉಪಸಂಹರಿಸುತ್ತಿದ್ದಂತೆ ಮತ್ತೆ ಎಚ್ಚರಗೊಳ್ಳುತ್ತಿದ್ದರು. ಈ ಎಚ್ಚರಿಕೆಯ ಕಾದಚಿತ್ಕತ್ವವು ಅಲ್ಲಿ ನಿಜವಾಗಿ ಆತ್ಮಾಶ್ರಯದೊಷಕ್ಕೆ ಆಶ್ರಯವಾಗಿತ್ತು. (ಅಂದರೆ ಅದು ನಿತ್ಯವಾಗಿರುತ್ತಿತ್ತು ಎಂದು ಭಾವ).

**ಮಾಧ್ವೋಕ್ತ್ಯುಜ್ಜ್ವಲಜ್ಞಾನದೀಪಾದ್ದೀಪಾನಯಂ ಸೃಜನ್ ॥**
**ಪಿಪ್ರಾಯ ಶ್ರೀಪ್ರಿಯಂ ದಿಪೋತ್ಸವೇನಾಂತೇವಸತ್ಕುಲೇ** ॥ ೪೯ ॥

ಅನಂತರದಲ್ಲಿ ಶ್ರೀನಿವಾಸಾಚಾರ್ಯರು ಶ್ರೀಮಧ್ವಾಚಾರ್ಯರ ಶಾಸ್ತ್ರವೆಂಬ ತುಪ್ಪದಿಂದ ಉಜ್ವಲಗೊಂಡ ತಮ್ಮ ಜ್ಞಾನದೀಪದಿಂದ ಶಿಷ್ಯರ ವೃಂದದಲ್ಲಿ ಜ್ಞಾನದೀಪಗಳನ್ನು ಹುಟ್ಟಿಸುತ್ತ, ರಮೆಯ ಅರಸನನ್ನು ದೀಪೋತ್ಸವದಿಂದ ಸಂತೋಷಗೊಳಿಸಿದರು.

ನಿರ್ವಾಣಕಾರಣಂ ಮಾಧ್ವೀ ಧಿಷಣ್ಯೇವೇತಿ ಶೇಮುಷೀ ॥
ತತ್ಪಾಠೇಕ್ಷೋತ್ಥಿತಾಯಾಶ್ಚ ಜಹ್ರೇಽಂತ್ಯಫಲತಾಂ ಮುದಃ ॥ ೫೦ ॥

ಈ ಆಚಾರ್ಯರ ಪಾಠಪ್ರವಚನವನ್ನು ನೋಡುವುದರಿಂದಲೇ ಉಂಟಾದ ಆನಂದದಲ್ಲಿರುವ ಅಂತ್ಯಫಲತ್ವವೆಂಬುದನ್ನು "ಮಧ್ವ ಸಿದ್ಧಾಂತದ ಜ್ಞಾನವೇ ಮೋಕ್ಷಸಾಧನವೆಂಬ" ಜ್ಞಾನವು ಅಪಹರಿಸಿಬಿಟ್ಟಿತ್ತು. (ಆನಂದವು ಅಂತ್ಯಫಲ, ಆದರೆ ಇಲ್ಲಿ ಆಚಾರ್ಯರ ಪಾಠದ ರೀತಿಯನ್ನು ನೋಡುವುದರಿಂದಾದ ಆನುದದಿಂದ ಮಧ್ವಸಿದ್ಧಾಂತವೇ ಮೋಕ್ಷಕಾರಣವೆಂಬ ಜ್ಞಾನಹುಟ್ಟುವುದರಿಂದ ಈ ಆನಂದಕ್ಕೆ ಮತ್ತೊಂದು ಫಲವಿರುವುದರಿಂದ ಅದು ಅಂತ್ಯಫಲವಾಗದೇ ಆ ಜ್ಞಾನವೇ ಅಂತ್ಯ ಫಲವಾಗಿತ್ತು ಎಂದು ಭಾವ).

ಛಾತ್ರಾ ಬಾಲಾ ಅಬಾಲಾಶ್ಚ ಶಾಸ್ತ್ರಂ ಲಘು ಮಹತ್ ಸಮಮ್ ॥
ಶ್ರಿತಾಸ್ತಮಂಬುಧಿಂ ನಾನಾಮಣಿಪ್ರಾಣಿಗಣಾ ಇವ ॥ ೫೧ ॥

ಬಾಲಕರಾದಂಥ ಹಾಗೂ ಯುವಕರಾದಂಥ ಶಿಷ್ಯರು ಮತ್ತು ಲಘು ಹಾಗೂ ಮಹತ್ ಆದ ಅನೇಕ ವಿಧ ಶಾಸ್ತ್ರಗ್ರಂಥಗಳು, ಇವೆಲ್ಲವೂ ಅನೇಕ ವಿಧ ಮುತ್ತುರತ್ನಗಳು - ಮೀನು ಮೊದಲಾದ ಪ್ರಾಣಿಗಳು ಸಮುದ್ರವನ್ನು ಆಶ್ರಯಿಸಿದಂತೆ ಆ ಶ್ರೀನಿವಾಸಾಚಾರ್ಯರನ್ನು ಆಶ್ರಯಿಸಿದ್ದವು.

ಶ್ರಿತಧ್ಯಾನಾರ್ಯಕಲ್ಪದ್ರುಃ ಪರಿತಶ್ಛಾತ್ರ ಸತ್ತಮಃ ॥
ಸುಯೋಗಪಟ್ಟಿಕಾನಿಷ್ಠೋ ಭಾಸಾ ವ್ಯಾಸ ಇವಾಸ ಸಃ ॥ ೫೨ ॥

ಸತ್ಯಧ್ಯಾನತೀರ್ಥರೆಂಬ ಕಲ್ಪವೃಕ್ಷವನ್ನು ಆಶ್ರಯಿಸಿರುವ ಈ ಶ್ರೀನಿವಾಸಾಚಾರ್ಯರು ಸುತ್ತಲೂ ಶ್ರೇಷ್ಠ ಶಿಷ್ಯರಿರುವಾಗ, ಒಳ್ಳೆಯ ಯೋಗಪಟ್ಟಿಕಾಸನದಲ್ಲಿ ಕುಳಿತುಕೊಂಡಾಗ ತೇಜಸ್ಸಿನಿಂದ ವೇದವ್ಯಾಸ ದೇವರಂತಾಗಿದ್ದರು.

ದಯಾಯಾ ಧರ್ಮಜೋ ಧರ್ಮದೀಕ್ಷಯಾ ಧರ್ಮಜಾನುಜಃ ॥
ಜಯೇನ ವಿಜಯೋ ರೇಜೇ ಗುರುರಾಜತನೂಜನೂಃ ॥ ೫೩ ॥

ಶ್ರೀ ಸಾತ್ವಿಕಾಚಾರ್ಯರ ಸುಪುತ್ರರಾದ ಶ್ರೀ ಆಚಾರ್ಯರು ದಯೆಯಿಂದ ಧರ್ಮರಾಜನಂತೆ, ಧರ್ಮದೀಕ್ಷೆಯಿಂದ ಧರ್ಮರಾಜನ ಅನುಜನಾದ ಭೀಮಸೇನದೇವರಂತೆ, ವಾದಿವಿಜಯದಿಂದ ವಿಜಯನಾದ ಅರ್ಜುನನಂತೆ ನಿತ್ಯ ವಿರಾಜಿಸುತ್ತಿದ್ದರು.

ಪರುಷಂ ಭಾಷಮಾಣೋಽಯಂ ಭೀಷಯನ್ ದ್ರಾವಯನ್ ಕಲಿಮ್ ॥
ಧೀತ್ವಿಷಾ ಭೂಷಯನ್ ಶಿಷ್ಯಾನ್ ತಚ್ಚಿಂತಾಂ ಚಿಂತಯನ್ನಹನ್ ॥ ೫೪ ॥

ಇವರು ಕಠೋರವಾಗಿ ಮಾತನಾಡುತ್ತ ಶಿಷ್ಯರಲ್ಲಿರುವ ಕಲಿಯನ್ನು ಭಯಗೊಳಿಸಿ ಓಡಿಸಿದ ನಂತರ ಜ್ಞಾನಸಿರಿಯಿಂದ ಅವರನ್ನು ಅಲಂಕರಿಸುತ್ತ, ಹಿಂದಿನ ಪಾಠಗಳ ಚಿಂತನೆ ಮಾಡಿಸುತ್ತ "ಪಾಠ ಕಂಠಸ್ಥವಾಗಲಿಲ್ಲವಲ್ಲ" ಎಂಬ ಚಿಂತೆಯನ್ನು ಪರಿಹರಿಸುತ್ತಿದ್ದರು.

ಸಾಹಿತ್ಯಶಾಬ್ದಮೀಮಾಂಸಾತರ್ಕವೇದಾಂತಪಂಚಕಮ್ ॥
ಯತ್ಕರೇ ಕರಶಾಖಾಭಂ ವಿದ್ಯಾಕ್ಷುತ್ಕ್ವಾಶ್ರಿತಸ್ಯ ತಮ್ ॥ ೫೫ ॥

ಸಾಹಿತ್ಯ, ವ್ಯಾಕರಣ, ಪೂರ್ವಮೀಮಾಂಸಾ, ನ್ಯಾಯ ಹಾಗೂ ವೇದಾಂತ ಈ ಐದು ಅವರ ಕೈಗಳಲ್ಲಿ ಬೆರಳಿನಂತಾಗಿದ್ದವು. ಅಂಥ ಆಚಾರ್ಯರನ್ನಾಶ್ರಯಿಸಿದವರಿಗೆ ಯಾವ ವಿದ್ಯೆಯಲ್ಲಿ ಹಸಿವಾಗುತ್ತದೆ? (ಎಲ್ಲ ವಿದ್ಯೆಗಳನ್ನೂ ಪೂರ್ಣಮಟ್ಟದಲ್ಲಿ ಹೊಂದುತ್ತಿದ್ದರೆಂಬ ಭಾವ).

ಏಷ ಶಿಷ್ಯಾನತಿಪ್ರೌಢಾಪ್ರೌಢಗ್ರಂಥರಸಾಯನಮ್ ॥
ಲೀಲಯಾ ಪಾಯಯಾಮಾಸ ಡಿಂಭಾನಂಬಾ ಗುಡಾಂಬುವತ್ ॥ ೫೬ ॥

ತಾಯಿಯು ಕಂದಮ್ಮಗಳಿಗೆ (ಒಳ್ಳೆಯ ಪಾನಕವನ್ನು ) ಬೆಲ್ಲದ ಸಿಹಿ ನೀರನ್ನು ಅನಾಯಾಸದಿಂದ ಕುಡಿಸುವಂತೆ ಈ ಆಚಾರ್ಯರು ತಮ್ಮ ಶಿಷ್ಯರಿಗೆ ಪ್ರೌಢವಾದ ಹಾಗೂ ಪ್ರೌಢವಲ್ಲದ ಎಲ್ಲತರಹದ ಗ್ರಂಥಗಳ ಸಾರವನ್ನು ಅನಾಯಾಸವಾಗಿ ಪಾನಮಾಡಿಸುತ್ತಿದ್ದರು.

ಅಮಲಾಽಮೂಲ್ಯಮೂಲಾರ್ಥಲಲತ್ತರಳಮಂಜುಳಾ ॥
ವ್ಯಾಖ್ಯೋಕ್ತಿಮೌಕ್ತಿಕಶ್ರೇಣೀವ್ಯಕ್ತರಕ್ತಾನುಮಾಮಣಿಃ ॥ ೫೭ ॥

(ಇಲ್ಲಿಂದ ೬೦ ರವರೆಗೆ ಅಂತ್ಯಕುಲಕ) ಶ್ರೀ ಆಚಾರ್ಯರ ಉಪದೇಶವೆಂಬುದು ಒಂದು ಸುಂದರ ಮಾಲೆಯಂತಿತ್ತು. ಆ ಮಾಲೆಯಲ್ಲಿ ನಿರ್ಮಲ ಹಾಗು ಅಮೂಲ್ಯವಾದ ಸರ್ವಮೂಲದ ಅರ್ಥವೇ ಚಂಚಲವಾದ ನಾಯಕಮಣಿಯಂತೆ ಇತ್ತು. ಟೀಕೆಯೇ ಮೊದಲಾದ ವ್ಯಾಖ್ಯಾನಗಳ ವಚನಗಳೆಂಬ ಮುತ್ತಿನಸಾಲಿನಲ್ಲಿ ಯುಕ್ತಿಗಳು ಕೆಂಪಾದ ಮಣಿಗಳಂತೆ (ಹವಳಂತೆ) ಗೋಚರಿಸುತ್ತಿದ್ದವು.

ನವ್ಯದಿವ್ಯಪರಿಷ್ಕಾರಮಂಜೂಷಾಂತರ್ನಿವೇಶಿತಾ ॥
ದುರಾಗಮತಮೋಪಾರಹರಾ ಧೀರಮನೋಹರಾ ॥ ೫೮ ॥

ಹೊಸ ಹೊಸ ಅದ್ಭುತವಾದ ಪರಿಷ್ಕಾರಗಳು ಆ ಮಾಲೆಯ ಪೆಟ್ಟಿಗೆ. ಅದರೊಳಗಿದ್ದ ಆ ಮಾಲೆಯು ತನ್ನ ತೇಜಸ್ಸಿನಿಂದ ದುರ್ಮತಗಳೆಂಬ ಕತ್ತಲೆಯನ್ನು ಹೋಗಲಾಡಿಸಿ ಬುದ್ಧಿವಂತರ ಮನಸ್ಸನ್ನು ಅಪಹರಿಸುತ್ತಿತ್ತು.

ಸುವರ್ಣಸ್ವರ್ಣರಚಿತಾ ಕೃಷ್ಣಸೂತ್ರಗಣಾಶ್ರಿತಾ ॥
ಭಕ್ತಿಮೂಲ್ಯೇತಿ ವಿತತಾ ವೇದಬ್ರಹ್ಮಪದಾರ್ಪಿತಾ ॥ ೫೯ ॥

ಒಳ್ಳೆಯ ವರ್ಣಗಳೆಂಬ ಸ್ವರ್ಣದಿಂದ ನಿರ್ಮಿತವಾದ ಈ ಮಾಲೆಗೆ ಆಕರ್ಷಕ ಸೂತ್ರವೇ (ಬ್ರಹ್ಮಸೂತ್ರವೇ) ಆಧಾರವಾಗಿತ್ತು. ಭಕ್ತಿಯೇ ಅದರ ಬೆಲೆ. ವೇದವೆಂಬ ಪರಬ್ರಹ್ಮನ ಪಾದಗಳಿಗೆ ಅದನ್ನು ಅರ್ಪಿಸುತ್ತಿದ್ದರು.

ತತ್ಪಾಠನಾಭಿಧಾ ಲಬ್ಧಾ ಮಾಲಾ ಯೈರಮಲಾಂತರೈಃ ॥
ತದ್ದೈವಮವದಿಶ್ಯಂಶ್ಚೇತ್ ಮೇ ಸಹಸ್ರಾಸ್ಯತಾ ಧ್ರುವಮ್ ॥ ೬೦ ॥

ಹೀಗೆ ಶೋಭಿಸುವ ಆ ಆಚಾರ್ಯರ ಪಾಠವೆಂಬ ಹಾರವನ್ನು ಹೊಂದಿದ ನಿರ್ಮಲ ಮನಸ್ಸುಳ್ಳ ಈ ಶಿಷ್ಯರ ಅದೃಷ್ಟವನ್ನು ಬಣ್ಣಿಸಲು ಪ್ರವೃತ್ತನಾದರೆ ನನಗೆ ಸಾವಿರ ಮುಖಗಳೇ ಬೇಕಾಗುತ್ತದೆ!!

ವಿದ್ಯಾವಾಂಛಾಽವರ್ಧತಾಸ್ಯ ಛಾತ್ರೇಚ್ಛಾ ತರ್ಪಿತಾ ಯಥಾ ॥
ಅವ್ಯಯೇ ಧನಚಿಂತಾ ಹಿ ವಿದ್ಯಾ ಚಿಂತಾ ವ್ಯಯೇಽಧಿಕಾ ॥ ೬೧ ॥

ಹೇಗೆ ಹೇಗೆ ಆಚಾರ್ಯರ ಪಾಠದಿಂದ ಶಿಷ್ಯರ ಅಪೇಕ್ಷೆಯು ಪೂರ್ಣವಾಗುತ್ತಿತ್ತೋ ಹಾಗೆಯೇ ಈ ಆಚಾರ್ಯರಿಗೆ ವಿದ್ಯೆಯ ವಾಂಛೆ ಹೆಚ್ಚಾಗುತ್ತಿತ್ತು. ಇದು ನಿಜವು. ಏಕೆಂದರೆ ಧನಚಿಂತೆಯು ಖರ್ಚಾಗದಿದ್ದರೆ ಹೆಚ್ಚಾಗುತ್ತಿದ್ದರೆ, ವಿದ್ಯಾಚಿಂತೆಯು ವಿದ್ಯೆ ಖರ್ಚಾದಷ್ಟೂ ಹೆಚ್ಚುತ್ತದೆಯಷ್ಟೆ.

ಅಪೀಪಠತ್ತಥಾನ್ಯಾನಿ ತರ್ಕಶಾಸ್ತ್ರಂ ವಿಶೇಷತಃ ॥
ಯತ್ತೀಕ್ಷ್ಣಧೀಷಣಾಶಕ್ತಿವ್ಯಕ್ತಿಕಾರಣಮಿಷ್ಯತೇ ॥ ೬೨ ॥

ವೇದಾಂತವನ್ನಷ್ಟೇ ಅಲ್ಲದೇ ಇತರ ಶಾಸ್ತ್ರಗಳನ್ನೂ ಆಚಾರ್ಯರು ಪಾಠನ ಮಾಡುತ್ತಿದ್ದರು. ಅದರಲ್ಲಿ ಹರಿತವಾದ ಬುದ್ಧಿಯ ಸಾಮರ್ಥ್ಯವನ್ನು ಅಭಿವ್ಯಕ್ತ ಮಾಡುವ ನ್ಯಾಯಶಾಸ್ತ್ರವನ್ನು ವಿಶೇಷವಾಗಿ ಹೇಳುತ್ತಿದ್ದರು.

ಶಾಸ್ತ್ರಶಿಕ್ಷಾಂ ಧರ್ಮದೀಕ್ಷಾಂ ದಕ್ಷಾಂ ಯೋ ದದದಕ್ಷತಾಮ್ ॥
ರರಕ್ಷಾನ್ನಾದಿಭಿಃ ಶಿಷ್ಯಾನ್ ಕಾ ಧೀಮಂಸ್ತತ್ಕೃಪೋಪಮಾ ॥ ೬೩ ॥

ಶಾಸ್ತ್ರದಲ್ಲಿ ಶಿಕ್ಷಣ ಧರ್ಮದ ದೀಕ್ಷೆ ಇವೆರಡನ್ನೂ ದಕ್ಷವಾಗಿ ನಾಶ ಹೊಂದದ ಹಾಗೆ ಮಾಡುತ್ತ ನೀಡುತ್ತ, ಅನ್ನವಸ್ತ್ರಾದಿಗಳನ್ನು ಕೊಟ್ಟು ಶಿಷ್ಯರನ್ನು ಪೋಷಿಸಿದ ಆ ಆಚಾರ್ಯರ ಕಾರುಣ್ಯಕ್ಕೆ ಹೇ ಬುದ್ಧಿಶಾಲಿಯಾದ ವಾಚಕನೇ! ಯಾವ ಉಪಮಾನವಿದೆ?

**ಆಪಂಚಮ್ಯಾಃ ಪಂಚಘಂಟಾ ನಿತ್ಯಂ ಪಾಠಪ್ರಪಂಚನಮ್ ॥**
**ಪಂಚತೇಽಸ್ಮಿನ್ ಪ್ರಪಂಚೇಶಕೃಪಾಕಾಂಚನಸಂಚಯಮ್** ॥ ೬೪ ॥

ಹೀಗೆ ಬೆಳಗ್ಗೆ ಐದು ಗಂಟೆಯಿಂದಾರಂಭಿಸಿ ಐದು ತಾಸು ಪ್ರತಿನಿತ್ಯವೂ ನಡೆಸುತ್ತಿದ್ದ ಪಾಠಪ್ರವಚನವು ಈ ಆಚಾರ್ಯರಲ್ಲಿ ಜಗದೊಡೆಯನಾದ ಶ್ರೀಹರಿಯ ಕಾರುಣ್ಯವೆಂಬ ಕಾಂಚನ ಸಂಪಾದನೆಯನ್ನು ವ್ಯಕ್ತಗೊಳಿಸುತ್ತಿತ್ತು.

**ಪವಿತ್ರಪೂರ್ಣಧೀವಾಣೀತ್ರಿವೇಣೀಪೂತಧೀಮಣಿಃ ॥**
**ಯಾನ್ ಸ್ನಾನನಲಸಃ ಸ್ವಾಂಶ್ಛಾಭೂಬುಧದ್ಭಾನುವದ್ಬುಧಃ** ॥ ೬೫ ॥

ಪವಿತ್ರವಾದ ಪೂರ್ಣಪಜ್ಞಾಚಾರ್ಯರ ವಾಣಿಯೆಂಬ ತ್ರಿವೇಣಿ (ಗಂಗೆ) ಯಿಂದ ತನ್ನ ಬುದ್ಧಿಯೆಂಬ ರತ್ನವನ್ನು ಪವಿತ್ರ (ಸ್ವಚ್ಛ) ಗೊಳಿಸಿಕೊಂಡ ಪಂಡಿತರಾದ ಶ್ರೀನಿವಾಸಾಚಾರ್ಯರು ನಡೆದಾಡುತ್ತಿದ್ದರೂ ಸ್ನಾನಮಾಡುತ್ತಿದ್ದರೂ ಸಹ ತನ್ನವರಾದ ಆ ಶಿಷ್ಯರಿಗೆ ಸೂರ್ಯನಂತೆ (ಸೂರ್ಯನು ಉದಯಿಸುವಾಗ ಮೇಲೇರುವಾಗ ಆಕಾಶ ಮಧ್ಯದಲ್ಲಿರುವಾಗ ಹೀಗೆ ಯಾವಾಗಲೂ ಪ್ರಕಾಶನೀಡುವಂತೆ) ಜ್ಞಾನಪ್ರಕಾಶವನ್ನು ನೀಡುತ್ತಿದ್ದರು.

**ಪಟುರ್ವೇಂಕಟರಾಡಿಷ್ಟಪಾಠನೇ ದೃಷ್ಟಿಮಾಂಸ್ತತಃ ॥**
**ಅಪೂಪುಜದ್ರಮಾಜಾನಿಂ ಜಗದ್ರಾಜಮಜಂ ದ್ವಿಜಃ** ॥ ೬೬ ॥

ನಿಪುಣ ಬ್ರಾಹ್ಮಣರೆನಿಸಿದ ಆ ಆಚಾರ್ಯರು ವೆಂಟಪತಿಗೆ ಬಹಳ ಪ್ರಿಯವಾದ ಪಾಠ ಪ್ರವಚನದಲ್ಲಿಯೇ ಹೆಚ್ಚು ದೃಷ್ಟಿಯುಳ್ಳವರಾಗಿ, ಆನಂತರ ಜಗದೊಡೆಯನಾದ, ಜನನವಿಲ್ಲದ, ಶ್ರೀರಮಾವಲ್ಲಭನಾದ, ಶ್ರೀ ಪರಮಾತ್ಮನನ್ನು ಪೂಜಿಸುತ್ತಿದ್ದರು.

**ಸೋಽನಲ್ಪಾನಲ್ಪಕಾಲೇನ ದಧ್ಯೌ ಮಾಧವವಿಗ್ರಹಾನ್ ॥**
**ಸಂಕ್ಷೇಪವಿಸ್ತರಾಭ್ಯಾಂ ಹಿ ಚಿಂತಯಂತಿ ಮನೀಷಿಣಃ** ॥ ೬೭ ॥

ಆ ಆಚಾರ್ಯರು ಅಲ್ಪಕಾಲದಲ್ಲಿಯ ಬಹಳವಾದ ಶ್ರೀಪತಿಯಾದ ಪರಮಾತ್ಮನ ರೂಪಗಳನ್ನು ಧ್ಯಾನಿಸುತ್ತಿದ್ದರು. ಜ್ಞಾನಿಗಳು ಸಂಕ್ಷೇಪವಿಸ್ತಾರ ಎರಡರಿಂದಲೂ ಧ್ಯಾನಿಸಲು ಸಮರ್ಥರಷ್ಟೆ.

**ಶ್ರೀಶಂ ಶ್ರೀವೇಂಕಟೇಶಾನಂ ವಂಶಾಭೀಷ್ಟಪ್ರವರ್ಷಣಮ್ ॥**
**ಹಯಾಸ್ಯಂ ವಿಠ್ಠಲಂ ಕೃಷ್ಣಂ ವಾಸಿಷ್ಠಂ ವಲ್ಗುಬಾಲಕಮ್** ॥ ೬೮ ॥

ಲಕ್ಷ್ಮೀಪತಿಯಾದ ಕುಲಸ್ವಾಮಿಯಾದ ಶ್ರೀ ವೆಂಕಟೇಶದೇವರನ್ನು, ಹಯಗ್ರೀವದೇವರನ್ನು, ವಿಠ್ಠಲದೇವರನ್ನು, ವಾಸಿಷ್ಠಕೃಷ್ಣನಾದ ವೇದವ್ಯಾಸದೇವರನ್ನು ಹಾಗೂ ಸುಂದರ ಬಾಲರೂಪನಾದ, ಉಡುಪಿಕೃಷ್ಣನನ್ನು ಅವರು ಅರ್ಚಿಸುತ್ತಿದ್ದರು. (೭೨ರವರೆಗೆ ಅಂತ್ಯ ಕುಲಕ).

ಪರಂ ಸ್ತೋಪಾಸ್ಯಮಶ್ವಾಸ್ಯಂ ಪ್ರಶಸ್ಯಂ ಮುನಿಭಿರ್ಭೃಶಮ್ ॥
ವ್ಯಾಸಂ ಪಾಪೇಭಪಂಚಾಸ್ಯಲಾಸ್ಯಂ ಪಂಚಾಸ್ಯಮಾರುತಿಮ್ ॥ ೬೯ ॥

ಹಾಗೆಯೇ ತಮ್ಮ ಉಪಾಸ್ಯಮೂರ್ತಿಯಾದ, ಶ್ರೀಸತ್ಯನಾಥತೀರ್ಥಾದಿ ಮುನಿಗಳಿಂದ ಅರ್ಚಿತನಾದ, ಹಯಗ್ರೀವ ಮೂರ್ತಿಯನ್ನು ಹಾಗೂ ವೇದವ್ಯಾಸದೇವರ ಮತ್ತೊಂದು ವಿಗ್ರಹವನ್ನು ಮತ್ತು ಪಾಪಗಳೆಂಬ ಆನೆಗಳಿಗೆ ಸಿಂಹದಂತಿರುವ ಪಂಚಮುಖಿ ಮುಖ್ಯಪ್ರಾಣದೇವರನ್ನೂ ಅವರು ಪೂಜಿಸುತ್ತಿದ್ದರು.

ಅನಂತಪದ್ಮನಾಭಶ್ರೀಲಕ್ಷ್ಮೀನಾರಾಯಣಾದಿಕಾನ್ ॥
ಸಾಲಿಗ್ರಾಮಗ್ರಾಮರಾಜದ್ರಂಗಮಂಗಲವಿಗ್ರಹಾನ್ ॥ ೭೦ ॥

ಸಾಲಿಗ್ರಾಮಗಳ ಮಂಡಲದಲ್ಲಿ ವಿರಾಜಿಸುವ ಅನಂತಪದ್ಮನಾಭ ಹಾಗು ಶ್ರೀಲಕ್ಷ್ಮೀನಾರಾಯಣ ಇವೇ ಮೊದಲಾದ ಪರಮಾತ್ಮನ ಮಂಗಲಕರ ರೂಪಗಳನ್ನು ಅವರು ಸೇವಿಸುತ್ತಿದ್ದರು.

ಪ್ರಾಣಪಕ್ಷಿಫಣೀಶಾದಿದೇವತಾತಾರತಮ್ಯತಃ ॥
ಜಯಾರ್ಯರಾಘವೇಂದ್ರಾರ್ಯಪ್ರಭೃತೀಂಶ್ಚ ಮಹಾಯತೀನ್ ॥ ೭೧ ॥

ಮುಖ್ಯಪ್ರಾಣದೇವರು, ಗರುಡದೇವರು ಶೇಷದೇವರೇ ಮೊದಲಾದ ದೇವತೆಗಳನ್ನು, ಹಾಗೂ ಶ್ರೇಷ್ಠಯತಿಗಳಾದ ಜಯತೀರ್ಥರು ರಾಘವೇಂದ್ರತೀರ್ಥರೇ ಮೊದಲಾದವರನ್ನೂ ತಾರತಮ್ಯಕ್ಕೆ ಅನುಸಾರವಾಗಿ ಪೂಜಿಸುತ್ತಿದ್ದರು.

ವಿಶ್ವಾನಾರ್ಚತ್ಸ ವಿಶ್ವಾಚಾರ್ಯನಾಶ್ವೇತಾನ್ ವಿಶ್ವಹೃದ್ದಿಶಾ ॥
ನವವಿಶ್ವಜ್ಞಶಿಷ್ಯಸ್ಯ ಶೇಮುಷ್ಯಾ ಬಲಮದ್ಭುತಮ್ ॥ ೭೨ ॥

ಹೀಗೆ ಆ ಆಚಾರ್ಯರು ಸ್ವಲ್ಪಕಾಲದಲ್ಲಿಯೇ ಜಗದ್ವಂದ್ಯರಾದ ಈ ಎಲ್ಲರನ್ನು, ಶ್ರೀಪೂರ್ಣಪ್ರಜ್ಞಾಚಾರ್ಯ, ತೋರಿಸಿದ ಮಾರ್ಗದಿಂದ ಪೂಜಿಸುತ್ತಿದ್ದರು. ಅಭಿನವ ಪೂರ್ಣಪ್ರಜ್ಞಾಚಾರ್ಯರಾದ ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯರಾದ ಇವರ ಬುದ್ಧಿಯ ಬಲವು ನಿಶ್ಚಿತವಾಗಿಯೂ ಅತ್ಯದ್ಭುತವಾದದ್ದು.

ಭಕ್ತಪಾವಿತ್ರ್ಯದೋ ರೇಜೇ ಪೂಜಯನ್ ದ್ವಿತಯೇಂದುವತ್ ॥
ಛಾತ್ರಾನೇತ್ರಾಬ್ಜರಾಜೋಽಯಂ ಪಾಠಯನ್ ಪೂರ್ಣಚಂದ್ರವತ್ ॥ ೭೩ ॥

ಹೀಗೆ ಪೂಜಿಸುವ ಈ ಆಚಾರ್ಯರು ನಿರೀಕ್ಷಿಸುವ ಭಕ್ತರಿಗೆಲ್ಲ ಪಾವಿತ್ರ್ಯವನ್ನು ನೀಡುತ್ತ, ಬಿದಿಗೆಯ ಚಂದ್ರನಂತೆ ಸ್ವಲ್ಪಕಾಲದಲ್ಲಿ ಮಾತ್ರ ದೃಶ್ಯರಾಗಿ ವಿರಾಜಿಸುತ್ತಿದ್ದರು. ಆದರೆ ಪಾಠಹೇಳುವಾಗ ಶಿಷ್ಯರ ಕಣ್ಣುಗಳೆಂಬ ನೈದಿಲೆಗಳಿಗೆ ಪ್ರಭುವಾಗಿ, ಪೂರ್ಣಚಂದ್ರನಂತೆ ಬಹಳ ಕಾಲ ದೃಶ್ಯರಾಗಿ ವಿರಾಜಿಸುತ್ತಿದ್ದರು.

ತ್ರಯೀಗೋಗೋಪಿಕಾಸಂಗರಾಸಕ್ರೀಡಾಭಿವರ್ಧಕೇ ॥
ತುಷಾರತ್ವಿಷಿ ಪೂರ್ಣೇ ಹಿ ಪೂರ್ಣತೋಷೋ ರಮೇಶಿತುಃ ॥ ೭೪ ॥

ಆದರೆ ಈ ಬಿದಿಗೆಯ ಚಂದ್ರನಲ್ಲಿ ತೋರುವ ಪ್ರೀತಿಗಿಂತ ಹೆಚ್ಚಾದ ಪರಿಪೂರ್ಣ ಪ್ರೀತಿಯನ್ನು ರಮೆಯರಸನಾದ ಶ್ರೀಕೃಷ್ಣನು ವೇದವಾಕ್ಯಗಳೆಂಬ ಗೋಪಿಕಾಸ್ತ್ರೀಯರ ಸಂಗಮವೆಂಬ ರಾಸಕ್ರೀಡೆಗೆ ಉತ್ತೇಜಕನಾದ ಆ ಪೂರ್ಣಚಂದ್ರನಲ್ಲಿ ತೋರುತ್ತಿದ್ದನಷ್ಟೆ.

ತೀರ್ಥಪೂತಚ್ಛಾತ್ರಪಂಕ್ತಿಯುತಃ ಕೃತಿಪತಿಸ್ತತಃ ॥
ಗಂಧಾಕ್ಷತಾದಿಭಿಃ ಶುದ್ಧಂ ವ್ಯಧಾದದ್ಧ್ವಾಸುಧಾಮ ಸಃ ॥ ೭೫ ॥

ತೀರ್ಥ ಗಂಧಾದಿಗಳಿಂದ ಪಾವನರಾದ ಶಿಷ್ಯರ ಸಾಲಿನಿಂದ ಕೂಡಿರುವ ಆ ಪಂಡಿತಶ್ರೇಷ್ಠರಾದ ಶ್ರೀನಿವಾಸಾಚಾರ್ಯರು ಶಿಷ್ಯರಿಗೆ ಗಂಧಾಕ್ಷತಾದಿಗಳನ್ನು ನೀಡಿದ ಮೇಲೆ ತಮ್ಮ ಪ್ರಾಣಕ್ಕೆ ಮಂದಿರವಾದ ಈ ಶರೀರವನ್ನು ಗಂಧಾಕ್ಷತಾದಿಗಳಿಂದ ಶುದ್ಧವನ್ನಾಗಿ ಮಾಡುತ್ತಿದ್ದರು.

ವಿತತಾಲಿಕನಿಕ್ಷಿಪ್ತಲಕ್ಷ್ಮೀನಾಥಾರ್ಪಿತಾಕ್ಷತಃ ॥
ಸ ವೀಕ್ಷಕಾಕ್ಷಿಭಿಃ ಸಾಕ್ಷಾತ್ ಫಾಲಾಕ್ಷ ಇವ ಲಕ್ಷಿತಃ ॥ ೭೬ ॥

ಆ ಆಚಾರ್ಯರು ಲಕ್ಷ್ಮೀನಾಥನಿಗೆ ಸಮರ್ಪಿಸಿದ ಅಕ್ಷತೆಯನ್ನು ತಮ್ಮ ವಿಸ್ತಾರವಾದ ಹಣೆಯಲ್ಲಿ ಇಟ್ಟುಕೊಂಡಾಗ ನೋಡುಗರ ಕಣ್ಣಿಗೆ ಸಾಕ್ಷಾತ್ ಫಾಲಾಕ್ಷನಾದ ಮಹಾ ರುದ್ರದೇವರಂತೆ ಕಾಣುತ್ತಿದ್ದರು.

ಪೀತ್ವಾ ತೀರ್ಥಂ ಕೃತಾರ್ಥೋಽಯಮ್ ಶಿಷ್ಯಾನ್ ಶ್ರೀಶಾರ್ಪಿತಂ ತತಃ ॥
ಭೋಜಯನ್ ಬಭುಜೇ ಭೋಜ್ಯಂ ಭವಭೀಕರಭೈಷಜಮ್ ॥ ೭೭ ॥

ತೀರ್ಥವನ್ನು ಸೇವಿಸಿ, ಪರಮಾತ್ಮನಿಗೆ ನಿವೇದಿಸಿದ ನೈವೇದ್ಯವನ್ನು ಶಿಷ್ಯರಿಗೆ ಉಣಬಡಿಸಿ, ಧನ್ಯರಾದ ಈ ಆಚಾರ್ಯರು ಅನಂತರ ತಾವೂ ಸಹ, ಸಂಸಾರಕ್ಕೆ ಉಗ್ರ ಔಷದವಾದ ಈ ನೈವೇದ್ಯವನ್ನು ಭೋಜನ ಮಾಡುತ್ತಿದ್ದರು.

ಛಾತ್ರಾ ನನಂದುರ್ಭುಂಜಾನಾಸ್ತಚ್ಛಾಸ್ತ್ರಾಮೃತಪಾಯಿನಃ ॥
ಚತುರರ್ಥಾಶ್ಚ ಪೀನೋಧ್ನೀಚತುರಾಪೀನಪಾ ಇವ ॥ ೭೮ ॥

ಶ್ರೀ ಆಚಾರ್ಯರ ಶಾಸ್ತ್ರಾಮೃತವನ್ನು ಪಾನಮಾಡುತ್ತಾ ಭೋಜನಮಾಡುವ ಆ ಶಿಷ್ಯರು, ದೊಡ್ಡ ಕೆಚ್ಚಲುಳ್ಳ ಕಾಮಧೇನುವಿನ ನಾಲ್ಕೂಸ್ತನಗಳ ಹಾಲು ಕುಡಿಯುವ ಕರುಗಳಂತೆ ನಾಲ್ಕು ಅರ್ಥ (ಪುರುಷಾರ್ಥ)ವುಳ್ಳವರಾಗಿ ಆನಂದ ಹೊಂದಿದರು.

**ಯಜನ್ ಸ ಯಾಜಯನ್ ಜ್ಞಾನಭೋಜ್ಯಾಭ್ಯಾಂ ಯಜ್ಞಮೀಶ್ವರಮ್ ||**
**ಏಕದೈವ ಭಜನ್ ದ್ವೇಧಾ ಫಲಬಾಹುಲ್ಯಭಾಗಭೂತ್ || ೭೯ ||**

ಆ ಆಚಾರ್ಯರು ಈ ರೀತಿಯಿಂದ ಜ್ಞಾನದಿಂದ ಹಾಗು ಅನ್ನದಿಂದಲೂ ತಾವು ಯಜ್ಞನಾಮಕ ಪರಮಾತ್ಮನನ್ನು ಪೂಜಿಸುತ್ತಾ, ಶಿಷ್ಯರಿಂದಲೂ ಪೂಜೆ ಮಾಡಿಸುತ್ತಾ, ಒಂದೇ ಕಾಲದಲ್ಲಿಯೇ ಎರಡು ವಿಧದಿಂದ ಸೇವಿಸುತ್ತ, ಬಹಳ ಫಲವನ್ನು ಹೊಂದಿದರು. (ಅಂದರೆ ಭೋಜನಕಾದಲದಲ್ಲಿಯೂ ಸಹ ಶಾಸ್ತ್ರಾರ್ಥವಿಚಾರರತರಾಗಿದ್ದರು ಎಂದು ಭಾವ.)

**ತಸ್ಯಾರ್ಯಸ್ಯ ಮಹಾಯಜ್ಞ ಶೀಲಸ್ಯ ಸಹಧರ್ಮಿಣೀ ||**
**ರಮಾರಮಣಸದ್ಭಕ್ತ್ಯಾ ನಿತ್ಯಂ ಪತ್ಯನುರೂಪಿಣೀ || ೮೦ ||**

ಹೀಗೆ ಪಂಚಮಹಾಯಜ್ಞಶೀಲರಾದ ಆ ಪೂಜ್ಯ ಆಚಾರ್ಯರ ಸಹಧರ್ಮಿಣಿಯೂ ಸಹ ಪರಮಾತ್ಮನಲ್ಲಿ ನಿರ್ಮಲ ಭಕ್ತಿಯನ್ನು ಮಾಡುತ್ತ, ನಿತ್ಯದಲ್ಲಿ ಪತಿಗೆ ಅನುರೂಪರಾಗಿದ್ದರು. (ಇಲ್ಲಿಂದ ೯೦ ರವರೆಗೆ ಅಂತ್ಯಕುಲಕ)

**ದೈತ್ಯಾರಾತಿಪ್ರೀತಿಭೂತಿಧೃತ್ಯಾ ನಿತ್ಯಂ ವಸುಂಧರಾ ||**
**ದಶಧೀಮತಸಂಬದ್ಧಾಽಚಂಚಲಶ್ರದ್ಧಯಾಽಚಲಾ || ೮೧ ||**

ದೈತ್ಯರನ್ನು ನಾಶಮಾಡುವ ಶ್ರೀಹರಿಯ ಅನುಗ್ರಹವೆಂಬ ಸಂಪತ್ತಿನಿಂದ ನಿತ್ಯವೂ ಆ ಆಚಾರ್ಯರ ಸಹಧರ್ಮಿಣಿಯು 'ವಸುಂಧರೆ' ಆಗಿದ್ದರು. ಪೂರ್ಣಪ್ರಜ್ಞಾಚಾರ್ಯರ ಮತದಲ್ಲಿ ಅಚಂಚಲ ಶ್ರದ್ಧೆಯಿರುವುದರಿಂದ 'ಅಚಲಾ' ಆಗಿದ್ದರು.

**ಭಕ್ತ್ಯುದ್ಭಾವಿತಸದ್ವರ್ಯಪ್ರಸತ್ತಿಲತಯಾ ಚ ಭೂಃ ||**
**ಸತ್ಕೃತ್ಯಾ ಪೃಥಿವೀ ಪೃಥ್ವ್ಯಾ, ಬಂಧುಮೋದದಯಾ ಸದಾ || ೮೨ ||**

ಆ ಆಚಾರ್ಯರ ಸಹಧರ್ಮಿಣಿಯು ಸಜ್ಜನರಲ್ಲಿ ಶ್ರೇಷ್ಠರಾದ ಯತಿ ಪ್ರಭೃತಿಗಳ ಅನುಗ್ರಹವೆಂಬ ಬಳ್ಳಿಯನ್ನು ಭಕ್ತಿಯಿಂದ ಹುಟ್ಟಿಸುವುದರಿಂದ 'ಭೂ' ಎನಿಸಿದ್ದರು. ನಿತ್ಯವೂ ಬಂಧುಗಳಿಗೆ ಆನಂದನೀಡುವ ವಿಶಾಲವಾದ ಸತ್ಕಾರದಿಂದ 'ಪೃಥಿವೀ' ಎಂದೆನಿಸಿದ್ದರು.

**ಪತಿಪ್ರೇಮ್ಣಾ ರಸಾಽನಂತಾ ಪಾತಿವ್ರತ್ಯಾದಿಸದ್ಗುಣೈಃ ||**
**ವಿಶ್ವಂಭರಾ ಛಾತ್ರಪುತ್ರಪೌತ್ರಪ್ರಭೃತಿವಿಶ್ವತಃ || ೮೩ ||**

ಆ ಆಚಾರ್ಯರ ಸಹಧರ್ಮಿಣಿಯು ಪತಿಯ ಪ್ರೀತಿಯಿಂದ 'ರಸಾ' ಎಂದೆನಿಸಿದ್ದರು. ಪಾತಿವ್ರತ್ಯಾದಿಸದ್ಗುಣಗಳು ಅವರನ್ನು 'ಅನಂತಾ' ಎಂದು ಕರೆಯಲು ಕಾರಣವಾಗಿದ್ದವು. ಶಿಷ್ಯರು ಪುತ್ರರು ಪೌತ್ರರು ಇವರೇ ಮೊದಲಾದ ಈ ಜಗತ್ತನ್ನು ಭರಿಸಿದ್ದರಿಂದ 'ವಿಶ್ವಂಭರಾ' ಎಂದೆನಿಸಿದ್ದರು.

ಸ್ಥಿರಾ ಸಂಪದ್ವಿಪತ್ಕಾಲಾನಾಕುಲಾಮಲಯಾ ಧಿಯಾ ॥
ಧರಾ ಸಂಶ್ರಿತಸಂಕಷ್ಟಾಧಾರ್ಯಾಹಾರ್ಯಚಯೇನ ಚ ॥ ೮೪ ॥

ಸಂಪತ್ತಿನ ಕಾಲ ಹಾಗು ವಿಪತ್ತಿನ ಕಾಲ ಎರಡರಲ್ಲಿಯೂ ಕಳವಳಗೊಳ್ಳದೇ ನಿರ್ಮಲವಾದ ಬುದ್ಧಿಯಿಂದ ಅವರು 'ಸ್ಥಿರಾ' ಎಂದೆನಿಸಿದ್ದರು. ಮತ್ತು ಆಶ್ರಯಿಸಿದವರ ಕಷ್ಟಗಳೆಂಬ ಹೊರಲಾಗದ ಬೆಟ್ಟಗಳನ್ನು ಧರಿಸಿದ್ದರಿಂದ 'ಧರಾ' ಎಂದೆನಿಸಿದ್ದರು.

ಧರಿತ್ರೀ ತೃಪ್ತಿಮಣಿನಾ ಯದೃಚ್ಛಾಲಬ್ಧಸಂಪದಿ ॥
ಧರಣೀ ಪಾಣಿಪದ್ಮಸ್ಥಭೂತಿಪದ್ಮವತೀತ್ವಿಷಾ ॥ ೮೫ ॥

ದೈವೇಚ್ಛೆಯಿಂದ ಪ್ರಾಪ್ತವಾಗುವ ಐಶ್ವರ್ಯದಲ್ಲಿ ತೃಪ್ತಿಯೆಂಬ ರತ್ನವನ್ನು ಧರಿಸಿದ್ದರಿಂದ 'ಧರಿತ್ರೀ' ಎಂದೆನಿಸಿದ್ದರು. ಕರಕಮಲಗಳಲ್ಲಿ ಐಶ್ವಯವೆಂಬ ಪದ್ಮಾವತಿಯ ಕಾಂತಿಯಿರುವುದರಿಂದ 'ಧರಣೀ' ಎಂದೆನಿಸಿದ್ದರು. (ಆಕಾಶರಾಜನ ಪತ್ನಿ ಧರಣಿದೇವಿಯಂತೆ ಎಂಬುದು ಗೂಡಾರ್ಥ)

ಕ್ಷೋಣಿಃ ಶ್ರವಣಮೋದಿನ್ಯಾ ವಾಣ್ಯಾ ಚ ಕ್ಷೀಣದೋಷಯಾ ॥
ಜ್ಯಾರಿದಾರೀಷುವಾಙ್ಮುಂಚತ್ಪತೀಶ್ವಾಸಾನುಗುಣ್ಯತಃ ॥ ೮೬ ॥

ಕಿವಿಗಳಿಗೆ ಸುಖಕರವಾದ ದೋಷವಿಲ್ಲದ ಮಾತಿನಿಂದ 'ಕ್ಷೋಣಿ' ಎಂದೆನಿಸಿದ್ದರು. ಹಾಗೆಯೇ ಪರವಾದಿಗಳೆಂಬ ಶತ್ರುಗಳ ಮೇಲೆ ವಾಕ್ಯಗಳೆಂಬ ಬಾಣಗಳನ್ನು ಪ್ರಯೋಗಿಸುವ ತಮ್ಮ ಪತಿಯೆಂಬ ಬಿಲ್ಲಿಗೆ ಯಾವಾಗಲೂ ಅನುಗುಣರಾಗಿರುವುದರಿಂದ 'ಜ್ಯಾ' ಎಂದೆನಿಸಿದ್ದರು.

ವಸುಮತ್ಯಪತ್ಯವಸುನಾ ವಸನೇನಾಕ್ಷಿಮೋದಿನಾ ॥
ಶರೀರಶೇಮುಷೀಶಕ್ತ್ಯಾಪ್ಯುರ್ವೀ ಸರ್ವಸಮರ್ಥಯಾ ॥ ೮೭ ॥

ಸಂತಾನವೆಂಬ ಭಾಗ್ಯದಿಂದ ಹಾಗು ಕಣ್ಣಿಗೆ ಆನಂದ ನೀಡುವ ವಸ್ತ್ರಧಾರಣೆಯಿಂದ 'ವಸುಮತೀ' ಎಂದೆನಿಸಿದ್ದರು. ಎಲ್ಲ ಕಾರ್ಯಗಳನ್ನು ನಿರ್ವಹಿಸುವಲ್ಲಿ ಚತುರವಾದ ದೈಹಿಕ ಹಾಗು ಬೌದ್ಧಿಕ ಶಕ್ತಿಗಳಿಂದ 'ಉರ್ವೀ' ಎಂದೆನಿಸಿದ್ದರು.

ಋಷ್ಯರ್ಚಯಾ ಕಾಶ್ಯಪೀ ಚ ಕ್ಷಿತಿಶ್ಚ ಕ್ಷೀಣತೃಷ್ಣಯಾ ॥
ಸರ್ವಂಸಹಾ ಶಿಷ್ಯಪೂರ್ವಸರ್ವಾಮರ್ಷಾದಿಚರ್ಯಯಾ ॥ ೮೮ ॥

ಕಶ್ಯಪಾದಿ ಋಷಿಗಳ ಅರ್ಚನೆಯಿಂದ 'ಕಾಶ್ಯಪೀ' ಎಂದೆನಿಸಿದ್ದರು. ದುರಾಸೆಗಳ ಕ್ಷಯದಿಂದ 'ಕ್ಷಿತಿ' ಎಂದೆನಿಸಿದ್ದರು. ಶಿಷ್ಯರೇ ಮೊದಲಾದ ಎಲ್ಲ ಜನರ ಸಿಟ್ಟಿನ ನಡೆನುಡಿಗಳನ್ನು ಸಹಿಸುವುದರಿಂದ 'ಸರ್ವಂಸಹಾ' ಎಂದೆನಿಸಿದ್ದರು.

**ಗವಾ ಗೊತ್ರಾ ಹೃದಾ ಪೃಥ್ವೀ ಮುದಾಽಽನಂದನದೇನ ಕುಃ ||**
**ಮಹೀ ಮಹೇನ ಧಿಷ್ಣ್ಯೇನಾವನಿಶ್ಚ ಕ್ಷಮಯಾ ಕ್ಷಮಾ || ೮೯ ||**

ಗೋಸೇವೆಯಿಂದ ' ಗೋತ್ರಾ' ಎಂದೆನಿಸಿದ್ದರು. ಹೃದಯದಿಂದ ಹಾಗು ಆನಂದದಿಂದ 'ಪೃಥ್ವೀ' (ವಿಶಾಲರು) ಎಂದೆನಿಸಿದ್ದರು. ಆನಂದಕರ ಧ್ವನಿಯಿಂದ 'ಕುಃ' ಎನಿಸಿದ್ದರು. ನಿತ್ಯೋತ್ಸವದಿಂದ ಬ್ರಾಹ್ಮಣಾದಿ ಪೂಜೆಯಿಂದ 'ಮಹೀ' ಎಂದೆನಿಸಿದ್ದರು. ಮನೆಯಿಂದ ಎಲ್ಲರಿಗೂ 'ಅವನಿ' ಯಂತೆ ರಕ್ಷಣೆ ನೀಡುತ್ತಿದ್ದರು. ಕ್ಷಮಾಗುಣದಿಂದ 'ಕ್ಷಮಾ' ಎಂದೆನಿಸಿದ್ದರು.

**ಕೌಶಿಕೇನ ಸತೀ ಪತ್ಯಾ ಪತಿವೀಕ್ಷಾರ್ಣವಾವಧಿಃ ||**
**ಲಕ್ಷ್ಮ್ಯಂಬಿಕಾಭಿಧಾ ಸಾಧ್ವೀ ಭೂಮೌ ಭೂಮಿನಿಭಾ ಬಭೌ || ೯೦ ||**

ಕೌಶಿಕ ಋಷಿಗೆ ಸತೀಯಂತೆ ಕೌಶಿಕಗೋತ್ರದ ಪತಿಗೆ ಸತಿಯಾಗಿರುವ ಇವರು ಗಂಡನ ನೋಟವೆಂಬ ಕಡಲಿನವರೆಗೆ ಮಾತ್ರ ತನ್ನ ಅವಧಿಯನ್ನು ಹೊಂದಿದ್ದರು. ಹೀಗೆ ಆ ಆಚಾರ್ಯರ ಸಹಧರ್ಮಿಣಿಯಾದ ಲಕ್ಷ್ಮೀಬಾಯೀ ಎಂಬ ಸಾಧ್ವಿಯು ಭೂಮಿಯಲ್ಲಿ ಭೂಮಿಯಂತೆ (ಭೂಮಿಯ ಎಲ್ಲ ಶಬ್ದಗಳ ಸಮನ್ವಯದಿಂದ) ವಿರಾಜಿಸುತ್ತಿದ್ದರು.

**ತದ್ದಂಪತೀಪ್ರೀತಿಭಾಜಾಮೃಧೇತಾಂ ತನುಚಿತ್ತನೂ ||**
**ಹಿಮಾಽಹಿಮೇದಿನೀಧ್ರೇಶಪ್ರೀತಿಭಾಜಾಮಿವಾಧಿಕಂ || ೯೧ ||**

ಇಂಥ ಆ ದಂಪತಿಗಳ ಅನುಗ್ರಹವನ್ನು ಯಾರು ಹೊಂದುತ್ತಿದ್ದರೋ, ಅಂಥ ಶಿಷ್ಯರ, (ಆಗಮಿಸುವಾಗ) ಕಿರಿದಾದ ಬುದ್ಧಿ ಹಾಗು ಶರೀರ ಇವೆರಡೂ, ಹಿಮವತ್ ಪರ್ವತಾಧಿಪತಿಯಾದ 'ನಾರಾಯಣದೇವರ' ಹಾಗು ಶೇಷಾಚಲಾಧಿಪತಿಯಾದ ಶ್ರೀನಿವಾಸದೇವರ ಅನುಗ್ರಹಹೊಂದಿದವರಿಗೆ ಹೇಗೋ ಹಾಗೆ ಅಧಿಕವಾಗಿ ಅಭಿವೃದ್ಧಿಯನ್ನು ಹೊಂದುತ್ತಿದ್ದವು.

**ರಕ್ತಾಂತೋಽಭೂತ್ ಬಹೀ ರಕ್ತಾ ತಾಂಬೂಲೀರಸವಾಸಸಾ ||**
**ಮಾಧ್ವಾಗಮಾನಂಗತಾತಸಂಗಾತ್ತದ್ರಸನಾಽಙ್ಗನಾ || ೯೨ ||**

ಆ ಆಚಾರ್ಯರ ನಾಲಿಗೆಯೆಂಬ ಅಂಗನೆ ತಾಂಬೂಲದರಸವೆಂಬ ಸೀರೆಯಿಂದ ಹೊರಗೆ ಕೆಂಪಾಗಿ ಕಾಣುತ್ತಿದ್ದವಳು, ಮಧ್ವಸಿದ್ಧಾಂತವೆಂಬ ಮನ್ಮಥಪಿತನಾದ ಶ್ರೀಕೃಷ್ಣನ ಮಿಲನದಿಂದ ಒಳಗೂ ಕೆಂಪಾಗಿಬಿಟ್ಟಳು! (ಆಚಾರ್ಯರು ತಾಂಬೂಲವನ್ನು ಸೇವಿಸುತ್ತಾ ಪಾಠಹೇಳುತ್ತಿದ್ದರೆಂಬುದರ ವರ್ಣನೆಯಿದು).

**ವಿಪಶ್ಚಿತ್ ಪಾಠಯನ್ ಛಾತ್ರಾನ್ ರಚಯನ್ನುತ ಸತ್ಕೃತೀಃ ||**
**ಚಾರುಪ್ರವಚನಂ ನನ್ವನ್ನಿಯಾಯ ಸಮಯಂ ಮುದಾ || ೯೩ ||**

ವಿದ್ವಾಂಸರಾದ ಶ್ರೀ ಆಚಾರ್ಯರು ಹೀಗೆ ಶಿಷ್ಯರಿಗೆ ಪಾಠ ಹೇಳುತ್ತ ಅಥವಾ ಗ್ರಂಥಗಳನ್ನು ರಚಿಸುತ್ತ ಅಥವಾ ಸುಂದರ ಪ್ರವಚನಗಳನ್ನು ಮಾಡುತ್ತಾ ಆನಂದದಿಂದ ಕಾಲವನ್ನು ಕಳೆಯುತ್ತಿದ್ದರು.

ಆನಕ್ತಂಭುಕ್ತಿ ಧೀಶಕ್ತ್ಯಾ ಮುಕ್ತಿದಂ ಭಕ್ತವತ್ಸಲಮ್ ||
ನಿತ್ಯಂ ಭಜನ್ನಯಂ ನೂನಂ ಭುವಿ ಧನ್ಯೋಕ್ತಿಭಾಜನಮ್ || ೯೪ ||

ಹೀಗೆ ರಾತ್ರಿಯ ಭೋಜನದ ಪರ್ಯಂತ ಬೌದ್ಧಿಕವ್ಯಾಪಾರದಿಂದ ಭಕ್ತವತ್ಸಲನಾದ ಮುಕುಂದನನ್ನು ಪ್ರತಿನಿತ್ಯವೂ ಸೇವಿಸುವ ಈ ಆಚಾರ್ಯರು ನಿಜವಾಗಿಯೂ 'ಧನ್ಯ'ರೆಂಬ ಪ್ರಶಂಸೆಗೆ ಯೋಗ್ಯರು.

ಶಾಸ್ತ್ರಾಭ್ಯಾಸಾಭಿಧಾಂ ದಿವ್ಯಾಮಹರ್ನಿಶಮುಪಾಸನಾಮ್ ||
ವಿದಧದ್ವಿಬುಧೋದಾತ್ತೋ ವಿರಲೋ ಹಿ ಧರಾತಲೇ || ೯೫ ||

ಹೀಗೆ ಹಗಲು ಇರುಳು ಶಾಸ್ತ್ರಾಭ್ಯಾಸರೂಪವಾದ ದಿವ್ಯವಾದ ಉಪಾಸನೆಯನ್ನು ಮಾಡುವ ಪಂಡಿತೋತ್ತಮರು ಭೂಮಂಡಲದಲ್ಲಿ ವಿರಳರಷ್ಟೆ!

ಶಯಾನೋಽಪಿ ರತಃ ಶಿಷ್ಯೈಃ ಸಹ ಶಾಸ್ತ್ರವಿಮರ್ಶನೇ ||
ಕಿಂ ಕಾಮಿನೀವಿಜಿಜ್ಞಾಸಾ ಧೀಮತಾಂ ಪ್ರತಿಬಂಧಿಕಾ || ೯೬ ||

ಮಲಗುವ ಸಮಯದಲ್ಲಿಯೂ ಸಹ ಅವರು ಶಿಷ್ಯರಿಂದ ಕೂಡಿಕೊಂಡು ಶಾಸ್ತ್ರಪರಾಮರ್ಶೆಯಲ್ಲಿ ಆಸಕ್ತರಾಗಿರುತ್ತಿದ್ದರು. ಕಾಮಿನೀಜಿಜ್ಞಾಸೆ ಧೀಮಂತರಿಗೆ ಪ್ರತಿಬಂಧಕವಾಗುತ್ತದೆಯೇ? (ಎಂದೂ ಇಲ್ಲ)

ಪಾರ್ಶ್ವೇ ಕಲತ್ರಮೇಕತ್ರಾಪರತ್ರ ಛಾತ್ರಸತ್ತಮಃ ||
ಆಸ್ತಾಮಿತಿ ಸ್ವಭಾವೋಕ್ತೌ ಭ್ರಮಂತ್ಯತ್ಯುಕ್ತಿತಾಂ ಜನಾಃ || ೯೭ ||

ಒಂದು ಕಡೆಯಲ್ಲಿ ಹೆಂಡತಿಯಿದ್ದರೆ ಮತ್ತೊಂದೆಡೆ ಶ್ರೇಷ್ಠಶಿಷ್ಯನು ಇರುತ್ತಿದ್ದನು. (ಹೀಗೆ ಆಚಾರ್ಯರು ಸದಾ ವಿಚಾರರತರಾಗಿರುತ್ತಿದ್ದರು) ಎಂದು 'ಸ್ವಭಾವೋಕ್ತಿ' ಅಲಂಕಾರದಿಂದ ಹೇಳಿದರೆ ಇದರಲ್ಲಿ ಅತಿಶಯೋಕ್ತಿಯಿದೆಯೆಂದು ಜನರು ಭ್ರಮೆಗೊಳಗಾಗುತ್ತಿದ್ದಾರೆ. (ಆದರೆ ಇದು ಅತಿಶಯೋಕ್ತಿ ಅಲ್ಲ)

ಭವಾರತಸ್ಯ ತಸ್ಯಾಪಿ ಭಾವಂ ಸಮುಭವತ್ಸುಖಮ್ ||
ಸುಖಂ ಹಿ ದುಃಖವನ್ನೂನಮಪ್ರಯತ್ನೇನ ಗಮ್ಯತೇ || ೯೮ ||

ಸಂಸಾರದಲ್ಲಿ ಆಸಕ್ತರಾಗಿರದಿದ್ದರೂ ಆ ಆಚಾರ್ಯರಿಗೆ ಸಾಂಸಾರಿಕ ಸುಖವು ಚೆನ್ನಾಗಿಯೇ ಇತ್ತು. ಸುಖವು ದುಃಖದಂತೆ ಪ್ರಯತ್ನವಿಲ್ಲದೆ ಬರುವುದಿದೆಯಷ್ಟೆ (ಸುಖಕ್ಕಾಗಿ ಅವರು ಪ್ರಯತ್ನಿಸುತ್ತಿರಲಿಲ್ಲ ಎಂದು ಭಾವ)

**ದಕ್ಷಿಣಾಯನವದ್ಯಜ್ಞಪುರ್ಯಾಂ ಸಾಧನವರ್ತ್ಮನಃ ||**
**ಉತ್ತರಾಯಣವತ್ತಸ್ಯ ಧಾರವಾಡಪುರೀ ಬಭೌ || ೯೯ ||**

ಹೀಗೆ 'ಯಜ್ಞ ಪುರೀ' ಎಂದೆನಿಸಿದ 'ಗದಗ'ನಗರವು ಅವರ ಸಾಧನೆಯ ಹಾದಿಗೆ ದಕ್ಷಿಣಾಯಣದಂತಿದ್ದರೆ 'ಧಾರವಾಡ' ನಗರವು ಉತ್ತರಾಯಣದಂತೆ ಶೋಭಿಸುತ್ತಿತ್ತು.

**ಪರೀವಾರಸ್ಯ ತಸ್ಯಾಸೀತ್ ತೇನ ಸರ್ವತ್ರ ಸಂಸ್ತುತಿಃ ||**
**ಗಂಧೇನ ಗಂಧಯಶಸೋ ವಿತತಸ್ಯೇವ ಸಂತತಮ್ || ೧೦೦ ||**

ಎಲ್ಲೆಡೆ ಹರಡಿರುವ ಸುಗಂಧದಕೀರ್ತಿಗೆ ಗಂಧಸಂಬಂಧವಿರುವುದರಿಂದಲೇ ಸಂಸ್ತುತಿ ಇರುವಂತೆ ಆ ಆಚಾರ್ಯರ ಪರಿವಾರಕ್ಕೆ ಆಚಾರ್ಯರ ಸಂಬಂಧಿಗಳೆಂಬ ಕಾರಣದಿಂದ ಎಲ್ಲೆಡೆ ಒಳ್ಳೆ ಗೌರವವು ನಡೆಯುತ್ತಿತ್ತು.

**ಅರಾಜತ ತ್ರಿಭೀ ರಾಜಾ ರಾಮಚಂದ್ರ ಇವಾನುಜೈಃ ||**
**ದ್ವಿಜಃ ಸ ವಿದುಷಾಂ ರಾಜಾ ಗುರುರಾಜಾತ್ಮಜಾಗ್ರಜಃ || ೧೦೧ ||**

ಪಂಡಿತರಾಜರಾದ ಆ ಗುರುರಾಜಾಚಾರ್ಯರ ಹಿರಿಯ ಪುತ್ರರು, ಮೂವರು ಅನುಜರಿಂದ ಕೂಡಿಕೊಂಡು ರಾಜನಾದ ಶ್ರೀ ರಾಮಚಂದ್ರನಂತೆ ವಿರಾಜಿಸುತ್ತಿದ್ದರು.

**ಸ್ವಸ್ರಾತತಹೃದಾಶಾಶ್ಚ ಚತಸ್ರಃ ಪ್ರೇಮಭಪ್ರಭಾಃ ||**
**ಪಪಾರಾಪಾರವಾತ್ಸಲ್ಯಕೌಮುದ್ಯಾ ಸ ಮುದೇಂದುವತ್ || ೧೦೨ ||**

ಪ್ರೀತಿಯೆಂಬ ನಕ್ಷತ್ರಗಳಿಂದ ಕಂಗೊಳಿಸುವ ನಾಲ್ಕು ಸಹೋದರಿಯರ ವಿಶಾಲ ಹೃದಯವೆಂಬ ನಾಲ್ಕು ದಿಕ್ಕುಗಳನ್ನು ಅಪಾರವಾದ ವಾತ್ಸಲ್ಯವೆಂಬ ಬೆಳದಿಂಗಳಿನಿಂದ ಆ ಆಚಾರ್ಯರು ಚಂದಿರನಂತೆ ಆನಂದದಿಂದ ಪೂರ್ಣಗೊಳಿಸುತ್ತಿದ್ದರು.

**ಶಿಷ್ಟಃ ಸ ತೋಕಾಷ್ಟಕಾಂತರ್ನಿಷ್ಠಲಕ್ಷ್ಮ್ಯಂಬಿಕಾಧವಃ ||**
**ಅಷ್ಟೈಶ್ವರ್ಯವಿಶಿಷ್ಟಶ್ರೀಶ್ರೀನಿವಾಸನಿಭೋ ಬಭೌ || ೧೦೩ ||**

ಅಷ್ಟಸಂತಾನಗಳ ಮಧ್ಯದಲ್ಲಿರುವ ಲಕ್ಷ್ಮೀಬಾಯಿಯವರ ಪತಿಯಾದ ಶಿಷ್ಟರಾದ ಆ ಶ್ರೀನಿವಾಸಾಚಾರ್ಯರು ಅಷ್ಟೈಶ್ವರ್ಯಗಳಿಂದ ಕೂಡಿದ ಶ್ರೀ ಶ್ರೀನಿವಾಸದೇವರಂತೆ ಶೋಭಿಸುತ್ತಿದ್ದರು.

**ಸಮ್ಮೃದ್ಧಸಂಪದಶ್ಶುದ್ಧಾಸ್ತನಯಾ ವಿನಯಾಲಯಾಃ ॥**
**ತದನ್ವಯಪ್ರಪಂಚಸ್ಯ ಪ್ರೋಕ್ತಾ ಲೋಕತ್ರಯಾಖ್ಯಯಾ ॥ ೧೦೪ ॥**

ಸಮ್ಮೃದ್ಧಸಂಪದ್ಭರಿತರಾದ ಶುದ್ಧರಾದ ವಿನಯಿಗಳಾದ ಮಕ್ಕಳು ಆ ಆಚಾರ್ಯರ ವಂಶವೆಂಬ ಪ್ರಪಂಚಕ್ಕೆ ಮೂರು ಲೋಕಗಳೆಂದು ಸ್ತುತ್ಯರಾಗಿದ್ದಾರೆ.

**ತತ್ಸುಂದರಪರೀವಾರಾಮರಾರಾಮೇ ವಿರೇಜಿರೇ ॥**
**ಪಂಚ ಪುತ್ರ್ಯಶ್ಚ ಸಂತಾನಫಲಿನ್ಯೋ ದ್ಯುಫಲೀನಿಭಾಃ ॥ ೧೦೫ ॥**

ಆ ಆಚಾರ್ಯರ ಸುಂದರವಾದ ಪರಿವಾರವೆಂಬ ದೇವೋದ್ಯಾನವನದಲ್ಲಿ ಸಂತಾನಫಲವುಳ್ಳ ಐವರು ಪುತ್ರಿಯರು ಸ್ವರ್ಗದ ಐದು ವೃಕ್ಷಗಳಾದ ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನಗಳಂತೆ ಕಂಗೊಳಿಸುತ್ತಿದ್ದರು.

**ಧನ್ಯಾ ಹಿ ಬಾಂಧವಾ ಯೇ ತಂ ಪಶ್ಯಂತೋ ವಿಗತಾಂಧತಾಃ ॥**
**ಭಜಂತೋ ಹಸ್ತಿನೋ ವಾಣೀಂ ಶೃಣ್ವಂತಃ ಶ್ರುತಿಭಾಗಿನಃ ॥ ೧೦೬ ॥**

ಯಾವ ಬಂಧುಗಳು ಆ ಆಚಾರ್ಯರನ್ನು ನೋಡುವುದರಿಂದ ಅಂಧತ್ವವಿಲ್ಲದವರೆಂದೆನಿಸುತ್ತಿದ್ದರೋ ಅವರೇ ಧನ್ಯರು. ಯಾರು ಅವರನ್ನು ಸೇವಿಸುವುದರಿಂದ ಕೈಗಳುಳ್ಳವರೆಂದೆನಿಸುವರೋ ಅವರೇ ಧನ್ಯರು. ಯಾರು ಅವರ ಧ್ವನಿಯನ್ನು ಮಾತನ್ನೂ ಕೇಳುವುದರಿಂದ ಕಿವಿಗಳುಳ್ಳವರೆಂದೆನಿಸುವರೋ ಅವರೇ ಧನ್ಯರು.

**ಮಿತ್ರತಾ ಚಿತ್ರಗೋಃ ಪುಣ್ಯಮಾತ್ರತೋ ನಾತ್ರ ಸಂಶಯಃ ॥**
**ಮಹಾವ್ಯಾಘ್ರೋಽಪಿ ತತ್ಪಾತ್ರಂ ಚಿತ್ರಮಿತ್ಯನ್ಯಥಾ ನ ಕಿಮ್ ॥ ೧೦೭ ॥**

ಅದ್ಭುತವಾದ ಗೋ(ಶಾಸ್ತ್ರೀಯವಾಕ್ಯ) ಸಂಪನ್ನರಾದ ಶ್ರೀ ಆಚಾರ್ಯರ ಮಿತ್ರತ್ವವು ಪುಣ್ಯಮಾತ್ರದಿಂದ ಲಭ್ಯವು. ಇಲ್ಲಿ ಯಾವ ಸಂಶಯವೂ ಇಲ್ಲ. ಹಾಗಿಲ್ಲದಿದ್ದರೇ : - ಮಹಾಹುಲಿಯೂ (ಮಹಾಹುಲಿ ಗೋಪಾಲಾಚಾರ್ಯರೂ) ಸಹ ಆ ಗೋವಿನ ಮಿತ್ರತ್ವಕ್ಕೆ ಪಾತ್ರವಾಗುವುದು ಆಶ್ಚರ್ಯದ ಸಂಗತಿಯಾಗದೇ ಇದ್ದೀತೇ? (ಹುಲಿಯು ಗೋವಿನ ಮಿತ್ರತ್ವವನ್ನು ಹೊಂದಬೇಕಾದರೇ ಅದೃಷ್ಟವೇ ಕಾರಣವಿರಬೇಕು. ಲೌಕಿಕ ಕಾರಣವಿರುವುದಿಲ್ಲ. ಹಾಗೆಯೇ ಮಹಾಹುಲಿ ಆಚಾರ್ಯರು ವಯಸ್ಸಿನಿಂದ ಹಿರಿಯರಾಗಿದ್ದರೂ, ಶ್ರೀ ಸತ್ಯಧ್ಯಾನತೀರ್ಥರಲ್ಲಿ ಜೊತೆಯಾಗಿ ಓದದಿದ್ದರೂ, ಅದ್ಭುತಗೋಸಂಪನ್ನರಾದ ಶ್ರೀ ಆಚಾರ್ಯರ ಮಿತ್ರತ್ವವನ್ನು ಹೊಂದಿದ್ದು ಅದೃಷ್ಟದ ಕಾರಣದಿಂದಲೇ ಎಂದು ಭಾವ.)

**ಶ್ರೀಶಶ್ರೀನಾಥಭಕ್ತಾನಾಂ ಮೂರ್ತಿಮಂತಮನುಗ್ರಹಮ್ ||**
**ಸದಾ ಸದಾಚಾರಚೈಲಂ ಚಂಚಲಸ್ತೌಮ್ಯಹಂ ಕಿಮು || ೧೦೮ ||**

ಶ್ರೀಪತಿಯ ಹಾಗು ಶ್ರೀ ಮಧ್ವಾರ್ಯಾದಿಗುರುಗಳ ಪರಮಾನುಗ್ರಹಮೂರ್ತಿಗಳೂ ಮತ್ತು ಸದಾಚಾರವೆಂಬ ಶುಭವಸ್ತ್ರವನ್ನು ಸದಾ ಧರಿಸಿರುವವರೂ ಆಗಿರುವ ಶ್ರೀ ಆಚಾರ್ಯರನ್ನು ಚಂಚಲಚಿತ್ತನಾದ ನಾನು ಎಷ್ಟು ಸ್ತುತಿಸಲು ಶಕ್ಯನಾಗುವೆನು? (ಸ್ತೋತ್ರಮಾಡಲು ನಾನು ಸಮರ್ಥನೇ ಅಲ್ಲ)

**ಹೃದ್ಯೋ ಹೃದ್ವ್ಯೋಪತಿತೋ ವರ್ಣನಬಿಂದುಃ ಸುಭಕ್ತಿಘನಜಾತಃ ||**
**ಮಂದೋಽಪಿ ಸಾಧುಬಂಧೋಶ್ಚರಿತಾಂಭೋಧೇಸ್ಸಹೇತ ಕಿಂ ವಿರಹಮ್ || ೧೦೯||**

(ಆದರೂ ಸಹ) ಹೃದಯವೆಂಬ ಆಕಾಶದಿಂದ ಬಿದ್ದಿರುವ, ಭಕ್ತಿಯೆಂಬ ಮೇಘದಿಂದ ಹುಟ್ಟಿದ ಸುಂದರವಾದ ಈ ವರ್ಣನಯೆಂಬ ಹನಿಯು ಸಣ್ಣದಾಗಿದ್ದರೂ ಸಹ ಸಜ್ಜನರಿಗೆ ಬಂಧುವಾದ ಆ ಆಚಾರ್ಯರ ಚರಿತ್ರೆಯೆಂಬ ಸಮುದ್ರದ ವಿರಹವನ್ನು ಸಹಿಸಲು ಸಾಧ್ಯವಾಗುವುದೇ? (ಎಂದೂ ಸಾಧ್ಯವಿಲ್ಲ - ಅದರಂತೆ ಶ್ರೀ ಆಚಾರ್ಯರ ಬಗ್ಗೆ ಈ ಅಲ್ಪನ ಸ್ವಲ್ಪ ವರ್ಣನೆಯೂ ಯುಕ್ತವೆಂದು ಭಾವ)

**ಕರಾಲೇಽಸ್ಮಿನ್ ಕಾಲೇ ಕಲಿಕಲುಷಜಕ್ಲೇಶನಿಲಯೇ**
**ಭವಜ್ವಾಲಾಮಾಲಾಹತಹಸಿತತೂಲಾಚಲಕುಲೇ ||**
**ಸ್ವಯಂ ಧರ್ಮಿಷ್ಠೋಽಲಂ ಶ್ರಿತಸುಜನಧರ್ಮಾವನಿರಯಂ**
**ಪರೀಕ್ಷಿತ್ ಪ್ರತ್ಯಕ್ಷಃ ಖಲು ಖಲಕಲಿಧ್ವಂಸನಕರಃ || ೧೧೦ ||**

ಕರಾಳವಾದ ಈ ಕಲಿಕಾಲದಲ್ಲಿ ಎಲ್ಲೆಲ್ಲೂ ಕಲಿಯ ಕಾಲುಷ್ಯದಿಂದ ಕ್ಲೇಶಗಳೇ ಹೆಚ್ಚು. ನಗುವುದೆಂಬ ಸಂತೋಷದ ಹತ್ತಿಯ ಬೆಟ್ಟಗಳು ಸಂಸಾರದ ಕಾಡ್ಗಿಚ್ಚಿನ ಜ್ವಾಲೆಗಳಿಂದ ಸುಟ್ಟುಹೋಗಿವೆ. ಇಂಥ ಕಾಲದಲ್ಲಿಯೂ ಸಹ ಸ್ವತಃ ತಾವು ಚೆನ್ನಾಗಿ ಧರ್ಮಿಷ್ಠರಾಗಿರುವದಷ್ಟೇ ಅಲ್ಲದೇ ತಮ್ಮನ್ನು ಆಶ್ರಯಿಸಿದವರನ್ನೂ ಧರ್ಮಿಷ್ಠರನ್ನಾಗಿಸಿ, ದುಷ್ಟನಾದ ಕಲಿಯನ್ನು ಧ್ವಂಸಮಾಡಿದ ಈ ಆಚಾರ್ಯರು ಪ್ರತ್ಯಕ್ಷವಾಗಿರುವ ಪರೀಕ್ಷಿತ ಮಹಾರಾಜನೇ ಸರಿ.

**ಭಕ್ತ್ಯಬ್ಧೇ ರುರುಶಕ್ತ್ಯಲಿರ್ಲಸತಿ ಸಚ್ಛಾಸ್ತ್ರದ್ಯುರತ್ನಾಶ್ರಿತೇ**
**ಮಧ್ವೋಕ್ತೋಚಿತತಂತ್ರನಾಲಸಹಿತೇ ಕ್ವೈರ್ಯಸ್ಯ ಚರ್ಚಾಭಿಧ್ಯೇ ||**
**ಬದ್ಧೇ ಹೃದ್ರಸಕಮ್ರವಾರಿಸದನೇ ಸಾಕಂ ಸ್ವನಾರ್ಯಾ ಮುದಾ**
**ದಾಂತೋಽಯಂ ಭಗವನ್ಮತಿಪ್ರಬಲದಸ್ತೇಜೇದ್ಯುಧ್ಯೇ ಮಾಂ ಸದಾ || ೧೧೧ ||**

ಆ ಆಚಾರ್ಯರ ಭಕ್ತಿಯು ಕಮಲದಂತಿದೆ. ಶಾಸ್ತ್ರಗಳೇ ಅದನ್ನು ಅರಳಿಸುವ ಸೂರ್ಯ. ಆ ಕಮಲಕ್ಕೆ ಮಧ್ವಾಚಾರ್ಯರು ಹೇಳಿದ ಯೋಗ್ಯವಾದ ತಂತ್ರಗಳೇ ದೇಟು. ಚರ್ಚೆಯೆಂಬ ನೀರಿನಿಂದ ತುಂಬಿರುವ ಆ ಆಚಾರ್ಯರ ಹೃದಯವೇ ಆ ಕಮಲಕ್ಕೆ ಸುಂದರವಾದ ಮಂದಿರವೆನಿಸುವ ಸರೋವರ. ಇಂತಹ ಈ ಕಮಲದಲ್ಲಿ ದೈತ್ಯ ಸಂಹಾರಕನಾದ ಪರಮಾತ್ಮನೆಂಬ ದುಂಬಿಯು ತನ್ನ ಸ್ತ್ರೀಯಾದ ರಮೆಯಿಂದ ಕೂಡಿಕೊಂಡು ಆನಂದದಿಂದ ವಿಹರಿಸುತ್ತದೆ. ಹೀಗೆ ಯಾವ ಆಚಾರ್ಯರ ಭಕ್ತಿಯಿದೆಯೋ, ಅಂಥ ದಾಂತರಾದ ಈ ಶ್ರೀನಿವಾಸಾಚಾರ್ಯರು ಭಗವದ್ವಿಷಯಕ ಬುದ್ಧಿಯ ಬಲವನ್ನು ನೀಡಿ, ಜ್ಞಾನಿಗಳಿಂದ ನನ್ನನ್ನು ಉತ್ತೇಜಿಸಲಿ.

**ಕಾಂತ್ಯಾ ಚಾರುಣಜಾತವೇದಸದೃಶೋ ವಾಚಾ ಕವಿರ್ಭೂಸುರ -**
**ಪ್ರಾಚಾರ್ಯೋಽಚದಲೀಕವಾಕ್ಕುಸಮಿತೇಃ ಹರ್ಯಕ್ಷಕಲ್ಪಃ ಪ್ರಭುಃ ॥**
**ಶುದ್ಧಾಚಾರಮಹಾಧನೋ ರಸಮುಷಿಃ ಶ್ರೇಯಸ್ಸುವಿದ್ಯಾರವಿಃ**
**ದಾರಿದ್ರ್ಯಾಂಕಕಳಾಧರೋಽಘಸರಣೇರ್ನಾಶಃ ಕೃತಾಂತೋಽಸ್ತುಮೇ ॥ ೧೧೨ ॥**

ಆ ಆಚಾರ್ಯರು ಕಾಂತಿಯಿಂದ ಕೆಂಪಾದ ಬಂಗಾರದಂತಿದ್ದರು. ದ್ವಿಜರಿಗೆ ಪ್ರಾಚಾರ್ಯರಾದ ಅವರು ಮಾತಿನಿಂದ ಕವಿಯಾಗಿದ್ದರು. ಅಜ್ಞಾನದಿಂದ ಜಗತ್ತು ಅಸತ್ ಎಂಬ ವಾದವನ್ನು ಖಂಡಿಸುವಲ್ಲಿ ಸಿಂಹದಂತೆ ಸಮರ್ಥರಾಗಿದ್ದರು. ಶುದ್ಧ ಅನುಷ್ಠನವೇ ಅವರಿಗೆ ದೊಡ್ಡ ದುಡ್ಡು. ಅವರು ಶ್ರೇಷ್ಠ ಜ್ಞಾನಿಗಳು. ಶ್ರೇಯಸ್ಸಿನಿಂದ ಹಾಗೂ ವಿದ್ಯೆಯಿಂದ ಸೂರ್ಯ. ದಾರಿಂದ್ರ್ಯವೆಂಬ ಚುಕ್ಕೆಯಿಂದ ಚಂದ್ರನಂತೆ ಇರುವ ಅವರು ನನ್ನ ಪಾಪ ಕೂಪಕ್ಕೆ ಯಮನಂತೆ ನಾಶಕರಾಗಲಿ.

**ವಂದೇಽಹಮಿಂದ್ರಮುಖಮಂದೇತರತ್ರಿದಶವೃಂದೇಡ್ಯಸುಂದರಪದೇ**
**ನಂದೇರಿತೇ ವಿಮತಿಸಂದೇಹನಾಶದಮುಕುಂದೇಕ್ಷಣೈಕಕರಣೇ ॥**
**ಮುದೇತರಾರ್ಥಕೃತಿವೃಂದೇ ರತಂ ಬುಧವರಂ ದೇವಿತಾಖಿಲಗುರುಂ**
**ನಿಂದೇತಿಹಾಸರಹಿತಂ ದೇವಚರ್ಯಮಪಿ ವಿಂದೇ ಶ್ರಿಯೇಽಥ ಸುವಿದೇ ॥ ೧೧೩॥**

ಇಂದ್ರನೇ ಮೊದಲಾದ ಅನೇಕ ದೇವತಾವೃಂದದಿಂದ ಸ್ತುತ್ಯವಾದ ಸುಂದರ ಪದಗಳಿಂದ ಗರ್ಭಿತವಾದ, ವಿರುದ್ಧಜ್ಞಾನ ಸಂದೇಹ ಇವುಗಳಿಗೆ ನಾಶವನ್ನು ನೀಡಿ ಮೋಕ್ಷಪ್ರದನಾದ ಪರಮಾತ್ಮನ ದರ್ಶನಕ್ಕೆ ಮುಖ್ಯಸಾಧನವಾದ, ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ನುಡಿದಂಥ, ಬಹಳ ಅರ್ಥಪೂರ್ಣವಾದ ಗ್ರಂಥಗಳಲ್ಲಿ ಆಸಕ್ತರಾದ, ಜ್ಞಾನಿವರೇಣ್ಯರಾದ, ಹಾಗೂ ಎಲ್ಲ ಗುರುಗಳನ್ನೂ ಸೇವಿಸಿದ, ನಿಂದೆಯಿಂದ ಕೂಡಿದ ಇತಿಹಾಸವಿಲ್ಲದವರಾದ, ದೇವತೆಗಳಂತೆ ಶುದ್ಧಾಚಾರದಿಂದ ಕಂಗೊಳಿಸುವ, ಶ್ರೀ ಶ್ರೀನಿವಾಸಾಚಾರ್ಯರಿಗೆ ನಾನು ವಂದಿಸುವೆ. ಹಾಗೂ ಸಾಧನ ಸಂಪತ್ತಿಗೊಸ್ಕರ ಮತ್ತು ಶ್ರೇಷ್ಠ ಜ್ಞಾನಕ್ಕೊಸ್ಕರ ಆಶ್ರಯಿಸುತ್ತೇನೆ.

ವಿರಕ್ತ್ಯಾ ಸದ್ಭಕ್ತ್ಯಾ ಸ್ವವಿಹಿತಸುವೃತ್ತ್ಯಾ ವಿಲಸತಃ
ಪಿತುರ್ವಿದ್ಯಾದಾನಪ್ರವಚನಜಕೃಷ್ಣೇಷ್ಟಮನಸಃ ॥
ಸುಚಾರಶ್ರೀವಾಚಾ ರುಚಿರರಚಿತಾಚಾರ್ಯಶತಕ -
ತ್ರಯೇ ಗೀತಾಚಾರ್ಯಂ ದ್ವಿತಯಮಪಿ ಕುರ್ಯಾದುರುದಯಮ್ ॥ ೧೧೪ ॥

ಅನ್ಯತ್ರ ವಿರಕ್ತಿಯಿಂದ, ಭಗವಂತನಲ್ಲಿ ಹಾಗೂ ಭಗವದ್ಭಕ್ತರಲ್ಲಿ ಭಕ್ತಿಯಿಂದ, ಸ್ವವಿಹಿತಸದಾಚಾರದಿಂದ ಕಂಗೊಳಿಸುವ, ವಿದ್ಯಾದಾನ ಪ್ರವಚನಗಳಿಂದ ಶ್ರೀಕೃಷ್ಣಪ್ರೀತಿಯನ್ನು ಮಾತ್ರ ಬಯಸುವ ಪೂಜ್ಯತಂದೆಗಳ ಸದಾಚಾರ ಸಂಪತ್ತಿನ ವಾಕ್ಯಗಳಿಂದ, ರುಚಿರನು ರಚಿಸಿದ ಈ ಆಚಾರ್ಯಶತಕತ್ರಯದಲ್ಲಿ, ಎರಡನೇಯದಾದ ಆಚಾರಶತಕವು ಗೀತಾಚಾರ್ಯನಾದ ಶ್ರೀಕೃಷ್ಣಪರಮಾತ್ಮನನ್ನು ಬಹಳ ದಯೆತೋರುವವನ್ನಾಗಿ ಮಾಡಲಿ.

ಇತಿ ರುಚಿರಾಚಾರ್ಯನಾಮಕೇನ ಬಾಲಕೇನ
ವಿರಚಿತೇ ಆಚಾರ್ಯಶತಕತ್ರಯೇ
ದ್ವಿತೀಯಂ ಆಚಾರಶತಕಂ ಸಮಾಪ್ತಂ
ಶ್ರೀಕೃಷ್ಣಾರ್ಪಣಮಸ್ತು



|| ಶ್ರೀ ||
|| ಶ್ರೀ ಗುರುರಾಜೋ ವಿಜಯತೇ ||

# ವಿಚಾರಶತಕಮ್

ಸ್ತಂಭೀಭೂತಕುವಾದಶಂಬರನಿಧಿರ್ಗಂಭೀರವಾಣೀನಿಧಿಃ
ಸದ್ಬೋಧಾಭಿಧದುಗ್ಧವೃದ್ಧಜನತಾಮುಗ್ಧಾನನಾಮೋದಿನೀ ||
ಕೀರ್ತಿವ್ಯಾಪ್ತಶುಭಾವನಿಶ್ಚ ಭಜತಾಂ ವಿದ್ಯಾಸುಧಾದಾಯಿನೀ
ಭಕ್ತ್ಯಾಲಂಕೃತತದ್ವಿಚಾರಸರಣಿರ್ಬಾಭಾತಿ ನಿತ್ಯಂ ಭುವಿ || ೧ ||

ಭಕ್ತಿಯಿಂದ ಅಲಂಕೃತವಾದ ಆ ಆಚಾರ್ಯರ ವಿಚಾರಧಾರೆಯು ಭೂಮಂಡಲದಲ್ಲಿ ನಿತ್ಯವೂ ವಿಜೃಂಭಿಸುತ್ತಿದೆ. ಆ ವಿಚಾರಸರಣಿಯಿಂದ ದುರ್ವಾದವೆಂಬ ಸಮುದ್ರವು ಸ್ತಬ್ಧವಾಗಿದೆ. ಶಬ್ದ - ಅರ್ಥಗಳ ಗಾಂಭೀರ್ಯದಿಂದ ಆ ವಿಚಾರಧಾರೆಯು ತುಂಬಿದೆ. ಒಳ್ಳೆಯ ಜ್ಞಾನವೆಂಬ ಹಾಲನ್ನು ನೀಡುವುದರಿಂದ ಅಭಿವೃದ್ಧಿಹೊಂದಿದ ಜನರ ಮುಗ್ಧ ಮುಖಕ್ಕೆ ಆನಂದಪ್ರದವಾಗಿದೆ. ಅದರ ಕೀರ್ತಿ ಸಜ್ಜನಮಂಡಲದಲ್ಲೆಲ್ಲೆಡೆ ಹರಡಿದೆ. ಸೇವಿಸುವವರಿಗೆ ವಿದ್ಯೆಯೆಂಬ ಅಮೃತವನ್ನು ಕರುಣಿಸುತ್ತಿದೆ.

ತದ್ವಾದಾಖ್ಯಃ ಸುರಸಿತಸರಿದ್ವಾರಿಘೋರಪ್ರವಾಹಃ
ನಿತ್ಯಂ ಗಂತಾಽಮಿತಮತಿಮತೋತ್ಕರ್ಷರತ್ನಾಕರೇಶಮ್ ||
ದೂರಾಚ್ಚಾರುಃ ಸವಿಧದರದಃ ಪ್ರೇಕ್ಷಕಾಣಾಮರಾಜೇತ್
ಯಸ್ಮಾಂತಸ್ಥಾಃ ಕುಮತನಿರತಾಃ ಪ್ರೇಷಿತಾ ಅಂತಕಾಂತಮ್ || ೨ ||

ಆ ಆಚಾರ್ಯರ ವಾದವು ದೇವತೆಗಳ ಧವಳ ನದಿಯಾದ ಗಂಗೆಯ ನೀರಿನ ಘೋರ ಪ್ರವಾಹದಂತೆ ಇತ್ತು. ಆ ಪ್ರವಾಹವು ಯಾವಾಗಲೂ ಪೂರ್ಣಪ್ರಜ್ಞಾಚಾರ್ಯರ ಮತದ ಉತ್ಕೃಷ್ಟತೆಯೆಂಬ ರತ್ನಗಳಿಗೆ ಆಕರನಾದ, ಸಮುದ್ರರಾಜನನ್ನೇ ಸೇರುತ್ತಿತ್ತು. ನೋಡುಗರಿಗೆ ದೂರದಿಂದ ಸುಂದರ. ಆದರೆ ಹತ್ತಿರ ಹೋದರೆ ಬಹು ಭಯಂಕರ. ದುರ್ವಾದದಲ್ಲಿ ನಿರತರಾದವರು ಅದರೊಳಗೆ ಹೋದರೆ ಅದು ಅವರನ್ನು ಅಂತಕನ (ಸೋಲಿಸಿ) ಹತ್ತಿರ ಕಳುಹಿಸುತ್ತಿತ್ತು.

ನವ್ಯನ್ಯಾಯೇ ನವತರರಸಾಸ್ವಾದನೋತ್ಪತ್ತಿಹೇತೌ
ಸಾಮಾನ್ಯೋಕ್ತೌ ಖರತರಪರಿಷ್ಕಾರದುರ್ಗಮ್ಯವಿತ್ತೌ ||
ವಾಕ್ಯಾರ್ಥಾಜೌ ದ್ವಿಜವರಸುಧೀ ರಾಜರಾಜತ್ಸಮಾಜೇ
ಲೀಲಾ ಕೂಲೇ ಕಮಲಸರಸೋಲ್ಲಾಸದಾ ಚಿಂತಯಾಸ್ಯ || ೩ ||

ನವೀನ ನ್ಯಾಯಶಾಸ್ತ್ರದಲ್ಲಿ ಸಾಮಾನ್ಯನಿರುಕ್ತಿಯು ಹೊಸ ಹೊಸ ರಸಗಳ (ವಿಷಯಗಳ) ಆಸ್ವಾದನೆಯ ಜನನಕ್ಕೆ ಕಾರಣವಾದದ್ದಾಗಿದೆ. ಆದರೆ ಚುರುಕಾದ ಪರಿಷ್ಕಾರಗಳಿಂದ ತುಂಬಿರುವ ಅದನ್ನು ತಿಳಿಯುವುದು ಬಹಳ ಕಠಿಣವು. ಇಂಥ ಸಾಮಾನ್ಯನಿರುಕ್ತಿಯ ವಿಷಯದಲ್ಲಿ ವಾಕ್ಯಾರ್ಥವೆಂಬ ಯುದ್ಧವು ಸಭೆಯಲ್ಲಿ ಆರಂಭವಾಗಿತ್ತು. ಆ ಸಭೆಯು ಪಂಡಿತಪ್ರಕಾಂಡರಿಂದ ಬ್ರಾಹ್ಮಣವರೇಣ್ಯರಿಂದ ವಿರಾಜಿಸುತ್ತಿತ್ತು. ಪದ್ಮಸರೋವರದ ದಡದಲ್ಲಿ ಅದು ನಡೆಯುತ್ತಿತ್ತು. ಆಗ ಅಲ್ಲಿ ಆ ಆಚಾರ್ಯರು ನಡೆಸಿದ ಕ್ರೀಡೆಯು ನೆನೆಯುವುದರಿಂದಲೇ ಉಲ್ಲಾಸನೀಡುವಂಥದ್ದು ಆಗಿದೆ. (ಇನ್ನು ಸ್ವತಃ ನೋಡಿದ್ದರೇ . . . ಏನು ಹೇಳುವುದಿದೆ? ಎಂಬ ಭಾವ)

ತತ್ರ ವ್ಯದ್ಯೋತತ ನಿಜತತಪ್ರೀತಿಭಾಜಾನುಜೇನ
ಯುಕ್ತಃ ಸೀತಾಪತಿರಿವ ಹರಿರ್ಲಕ್ಷ್ಮಣೇನಾತುಲೇನ ॥
ನವ್ಯಂ ಭವ್ಯಂ ಸುದೃಢಮಮಲಂ ಮಂಡಯನ್ ಯಸ್ಸ್ವವಾದಂ
ಚಕ್ರೇಽಲೋಲೇ ವಿಬುಧಜಲಧೌ ಚಿತ್ರತೋಲ್ಲೋಲಜಾಲಮ್ ॥ ೪ ॥

ಅಲ್ಲಿ ತನ್ನ ವಿಶಾಲವಾದ ಪ್ರೀತಿಗೆ ಪಾತ್ರರಾದ 'ಕೇಶವಾಚಾರ್ಯ' ಎಂಬ ಅನುಜರಿಂದ ಕೂಡಿರುವ ಶ್ರೀ ಆಚಾರ್ಯರು, ಅಸದೃಶನಾದ ಲಕ್ಷ್ಮಣನಿಂದ ಸಹಿತನಾದ ಸೀತಾಪತಿ ಶ್ರೀರಾಮಚಂದ್ರನಂತೆ ಪ್ರಕಾಶಿಸುತ್ತಿದ್ದರು. ಆ ಆಚಾರ್ಯರ ಸಹೋದರರೂ ಅಸದೃಶರಾಗಿದ್ದರು. ಅವರು ತಮ್ಮ ಹೊಸಮಾದರಿಯ ಭವ್ಯವೂ ಸುದೃಢವೂ ನಿರ್ದುಷ್ಟವೂ ಆದ ತಮ್ಮ ಗುರುಗಳಾದ ಶ್ರೀ ಆಚಾರ್ಯರು ತಿಳಿಸಿದ್ದ ವಾದವನ್ನು (ಆಚಾರ್ಯರು ಬರುವುದಕ್ಕೆ ಪೂರ್ವದಲ್ಲಿ) ಮಂಡಿಸುತ್ತ ನಿಶ್ಚಂಚಲವಾದ ವಿದ್ವಾಂಸರ ಸಾಗರದಲ್ಲಿ ಆಶ್ಚರ್ಯದ ಅಲೆಗಳನ್ನು ಉಂಟು ಮಾಡಿದ್ದರು. (ಅನಂತರ ಆಚಾರ್ಯರು ಆ ವಾದವನ್ನು ಮುಂದುವರೆಸಿದ್ದರು)

ನಾನಾಕೋಟಿಕ್ರಮಖರಪರಿಷ್ಕಾರಘೋರಾನಲೋದ್ಯ -
ಜ್ಜ್ವಾಲಾದಗ್ಧಾಖಿಲಖಲಮತಾನಂಗಶೃಂಗಾರಲೀಲಾ ॥
ನಿತ್ಯಂ ಚಿತ್ರಾನುಗಮಗಮನಾ ನೂತ್ನತದ್ವಾದಮಾಲಾ
ಪ್ರೈಕ್ಷಿ ಪ್ರೇಕ್ಷಾಽಕ್ಷಿಭಿರಿಹ ಸತಾಂ ತ್ರ್ಯಕ್ಷಫಾಲಾಕ್ಷಜೇವ ॥ ೫ ॥

ಅನೇಕ ಕೋಟಿಕ್ರಮಗಳು ಹಾಗೂ ತೀಕ್ಷ್ಣ ಪರಿಷ್ಕಾರಗಳೆಂಬ ಬೆಂಕಿಯ ಚಿಮ್ಮುವ ಜ್ವಾಲೆಗಳಿಂದ ಎಲ್ಲ ದುಷ್ಟವಾದಗಳೆಂಬ ಮನ್ಮಥನ ಶೃಂಗಾರ ಲೀಲೆಯನ್ನು ಸುಡುತ್ತಿದ್ದ, ವಿಚಿತ್ರ ಅನುಗಮಗಳೆಂಬ ಸಂಚಾರವುಳ್ಳ ಆ ಆಚಾರ್ಯರ ಹೊಸ ವಾದಮಾಲೆಯು ಸಜ್ಜನರ ಜ್ಞಾನದೃಷ್ಟಿಗೆ ಮುಕ್ಕಣ್ಣನ ಹಣೆಯ ಕಣ್ಣಿನಿಂದ ಹೊರಟ ನೋಟದಂತೆ ಕಂಡಿತ್ತು.

**ಶುಭ್ರಶ್ರೋತ್ರಪ್ರವರಶಿಖಿನಾಂ ಶರ್ಮಣಾಽಽಸಾಭ್ರವಾಣೀ**
**ಘಂಟಾವಾಣೀ ಸುಖಮುನಿಸುವಾಕ್ಶ್ರೀಶಪೂಜೋತ್ಸವೇನ ॥**
**ದುರ್ವಾಙ್ಮತ್ತದ್ವಿರದದರದಾನೇನ ವನ್ಯೇಂದ್ರವಾಣೀ**
**ಕಾಂತಾವಾಣೀ ಬುಧಮಣಿಹೃದಾಕರ್ಷಣೇನಾಸ್ಯ ವಾಣೀ ॥ ೬ ॥**

ಆಗ ಆ ಆಚಾರ್ಯರ ವಾಣಿಯು ನಿರ್ಮಲರಾದ ಶ್ರೇಷ್ಠ ಶ್ರೋತೃಗಳೆಂಬ ಶಿಖಿ(ನವಿಲು)ಗಳಿಗೆ ಆನಂದ ನೀಡುವುದರಿಂದ ಮೇಘವಾಣಿಯಾಗಿತ್ತು. ಶ್ರೀಪೂರ್ಣಪ್ರಜ್ಞಾಚಾರ್ಯರ ವಾಕ್ಯವೆಂಬ ಲಕ್ಷ್ಮೀದೇವಿಗೆ ಒಡೆಯನಾದ ಪರಮಾತ್ಮನ ಪೂಜೆಯಲ್ಲಿ ಘಂಟಾವಾಣಿಯಾಗಿತ್ತು. ದುರ್ವಾದಿಗಳೆಂಬ ಮದಿಸಿದ ಆನೆಗಳಿಗೆ ಭಯಹುಟ್ಟಿಸುವಲ್ಲಿ ಮೃಗರಾಜನಾದ ಸಿಂಹದ ವಾಣಿಯಾಗಿತ್ತು. ಹಾಗೆಯೇ ವಿದ್ವದ್ವರೇಣ್ಯರ ಹೃದಯವನ್ನು ಆಕರ್ಷಿಸುವಲ್ಲಿ ಕಾಂತಾವಾಣಿಯೇ ಆಗಿತ್ತು.

**ವಾದಾಜೌ ತದ್ವಿಜಯಮತುಲಂ ವರ್ಣಯೇ ಕಿನ್ನು ಯತ್ರ**
**ಸತ್ಯಾಭಿಜ್ಞದ್ಯುಮಣಿರರುಣಃ ಶ್ರೀನೃಸಿಂಹೌಷಧೀಶಃ ॥**
**ಧೀರಾಸ್ತಾರಾಸ್ಸುಜನಹೃದಹೋ ದುರ್ಮನೀಷಾನಿಶಾ ಚ**
**ಸರ್ವೇ ನೂನಂ ಸದಸಿ ಮಿಲಿತಾಃ ಸಾಕ್ಷಿಣೋಽಸ್ತೇಲಕ್ಷಯಂತ ॥ ೭ ॥**

ಆ ವಾದಯುದ್ಧದಲ್ಲಿ ಆ ಆಚಾರ್ಯರ ವಿಜಯವನ್ನು ಎಷ್ಟೆಂದು ವರ್ಣಿಸೇನು? ಆ ವಿಷಯದಲ್ಲಿ ಶ್ರೀಸತ್ಯಾಭಿಜ್ಞತೀರ್ಥರೆಂಬ ಕೆಂಪಾದ ಸೂರ್ಯನು ಹಾಗು ವರಖೇಡಿ ನರಸಿಂಹಾಚಾರ್ಯರೆಂಬ ಚಂದ್ರನು, ಅನೇಕ ವಿದ್ವಾಂಸರೆಂಬ ನಕ್ಷತ್ರಗಳು ಮತ್ತು ಸಜ್ಜನರ ಹೃದಯವೆಂಬ ಹಗಲು, ದುರ್ಜನರ ಬುದ್ಧಿಯೆಂಬ ರಾತ್ರಿ ಹೀಗೆ ಸಭೆಯಲ್ಲಿ ಸೇರಿದ ಇವರೆಲ್ಲರು ಸಾಕ್ಷಿಗಳಾಗಿ ನೋಡುತ್ತಿದ್ದರಷ್ಟೆ.

**ವೀಕ್ಷಾರುದ್ಧಾಬುಧಜನಗಿರಃ ಕಾಂಸ್ಯನಿಸ್ವಾನಭಾಜಃ**
**ಪ್ರತ್ಯುಕ್ತ್ಯಾರಿಗ್ರಹಣನಿರತಶ್ರೋತ್ರಸದ್ದ್ವಾರಪಸ್ಯ ॥**
**ವಾದೋದ್ವೇಗಾಧಿಗತತರುಣೋಷ್ಣಾಂಶುಶೋಣತ್ವಿಷೋಽಸ್ಯ**
**ಸ್ತೋತ್ರೇ ಭೂಷಾಽಭವದಿಹ ಭೃಶಂ ಪೌನರುಕ್ತ್ಯಾಖ್ಯದೋಷಃ ॥ ೮ ॥**

ಆ ಆಚಾರ್ಯರು ನೋಟಬೀರಿದರೆ ಸಾಕು ಅಪಂಡಿತರ ಮಾತುಗಳು ತಡೆಗೊಳ್ಳುತ್ತಿತ್ತು. ಕಂಚಿನ ನಾದದಂತೆ ಅವರ ಧ್ವನಿ. ಕಿವಿಗಳಾದರೋ ದ್ವಾರಪಾಲಕರಂತೆ ಪ್ರತಿವಾದಿಗಳ ಪ್ರತ್ಯುತ್ತರವೆಂಬ ಶತ್ರುವನ್ನು ಹಿಡಿಯುವುದರಲ್ಲಿಯೇ ನಿರತವಾಗಿದ್ದವು. ಅವರ ದೇಹವೂ ಸಹ ವಾದದಲ್ಲಿ ಉದ್ವೇಗವಾದಾಗ ತರುಣ ಸೂರ್ಯನಂತೆ ಕೆಂಪಾದ ಕಾಂತಿಯನ್ನು ಹೊಂದುತ್ತಿತ್ತು. ಹೀಗೆ ಕಂಗೊಳಿಸುವ ಆ ಆಚಾರ್ಯರ ಸ್ತುತಿಯಲ್ಲಿ ಪೌನರುಕ್ತ್ಯದೋಷವು ಆಗ ಭೂಷಣವೇ ಆಗಿತ್ತು.

(ಎಲ್ಲರೂ ಶ್ರೀ ಆಚಾರ್ಯರ ದಿಗ್ವಿಜಯವನ್ನು, ಮೇಲಿಂದ ಮೇಲೆ ಹೋಗಳಿದ್ದನ್ನೇ ಆನಂದದಿಂದ ಹೊಗಳುತ್ತಿದ್ದರೆಂದು ಭಾವ.)

ತೀರ್ಥಕ್ಷೇತ್ರ ಪ್ರವರಗಮನೇ ನಂದತೀರ್ಥಾಮೃತಾರ್ಥಂ
ಯಚ್ಛನ್ನಚ್ಛಾನ್ನಿಜಪರಿಜನಾನಾಶು ತನ್ವನ್ ಸುಧೀಶಃ ||
ಮಧ್ಯೇ ಮಾರ್ಗಂ ಪರಸಮಯಿನಾಮಂಧಜಾತಾಂಧಕಾನಾಂ
ಭೀಮಾಭೋಽಭಾತ್ಸ ನಿರಭಿಭವೋ ಭೂಸುರೋ ಭಾಸುರೋಽಲಮ್ || ೯ ||

ಜ್ಞಾನಿವರೇಣ್ಯರಾದ ಆ ಆಚಾರ್ಯರು ತೀರ್ಥಕ್ಷೇತ್ರಗಳನ್ನು ಕುರಿತು ಸಂಚರಿಸುವಾಗ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಶಾಸ್ತ್ರವೆಂಬ ಅಮೃತವನ್ನು ನೀಡುತ್ತ, ತನ್ನನ್ನು ಸೇವಿಸುವ ಜನರನ್ನು ಸ್ವಚ್ಛರನ್ನಾಗಿಸುತ್ತಿದ್ದರು. ಭೂದೇವತೆ (ಬ್ರಾಹ್ಮಣ)ಯಾದ ಅವರು ಮಾರ್ಗ ಮಧ್ಯದಲ್ಲಿ, ಕುರುಡ ದೊರೆ (ಧೃತರಾಷ್ಟ್ರ)ಯಿಂದ ಹುಟ್ಟಿದ ಮದಾಂಧರಾದ ದುರ್ಯೋಧನಾದಿಗಳಂತಿರುವ ಪರವಾದಿಗಳಿಗೆ ಸೋಲಿಲ್ಲದ ಭೀಮಸೇನದೇವರಂತೆ ಪ್ರಕಾಶಮಾನರಾಗಿ ಶೋಭಿಸುತ್ತಿದ್ದರು.

ನಿತ್ಯಂ ಮಿಥ್ಯಾಮತಹತಿರತಿವ್ಯಕ್ತಚಿತ್ತೋತ್ತಮೇಷ್ಟಂ
ಶಿಷ್ಟಂ ಸ್ರಷ್ಟೃಪ್ರಭೃತಿಸುಖದೋತ್ಕೃಷ್ಟದೃಷ್ಟ್ಯಾತಿಪುಷ್ಟಮ್ ||
ಭಕ್ತ್ಯಾ ಭೀತ್ಯಾ ವಿಬುಧಮಭಜನ್ ಯಾತ್ರಿಕಾ ಯೇಽತ್ರ ತೇ ತಂ
ಧನ್ಯಾ ಮಾನ್ಯಾ ನನು ಜನಗಣಾಃ ಪುಣ್ಯಭಾಜೋಽಘಶೂನ್ಯಾಃ || ೧೦ ||

ನಿತ್ಯವೂ ಮಿಥ್ಯಾಮತವಾದ ಅದ್ವೈತವನ್ನು ಖಂಡಿಸುವ ಆಸಕ್ತಿಯಿಂದ ಮನಸ್ಸಿನ ಉನ್ನತ ಅಪೇಕ್ಷೆಯನ್ನು ಪ್ರಕಟಮಾಡುತ್ತಿದ್ದ, ಶಿಷ್ಟರಾದ, ಬ್ರಹ್ಮಾದಿಗಳಿಗೆ ಸುಖಪ್ರದವಾದ ಪರಮಾತ್ಮನ ಉತ್ಕೃಷ್ಟವಾದ ನೋಟದಿಂದ ಪರಿಪುಷ್ಟರಾದ ಆ ಆಚಾರ್ಯರನ್ನು, ಆ ಯಾತ್ರಾಕಾಲದಲ್ಲಿ ಯಾವ ಯಾತ್ರಿಕರು ಭಯದಿಂದ ಹಾಗೂ ಭಕ್ತಿಯಿಂದ ಸೇವಿಸುತ್ತಿದ್ದರೋ, ಆ ಜನರೇ ನಿಜವಾಗಿ ಧನ್ಯರು. ಮಾನ್ಯರು. ಪುಣ್ಯಶಾಲಿಗಳು ಮತ್ತು ಪಾಪಶೂನ್ಯರು.

ವಾರಾಣಸ್ಯಾಂ ವಿಶದಧಿಷಣಾಸ್ವರ್ಣಶಾಣಾಯಿತಾಯಾಂ
ಶ್ರೀಮನ್ನಾರಾಯಣಸುಕರುಣಾಕಾರಣೇ ಶ್ರೀಬದರ್ಯಾಂ ||
ಪೂರ್ವಾಪೂರ್ವಾಖಿಲಪುರವರೇ ಸ್ವೀಯಕರ್ನಾಟದೇಶೇ
ಕೀನಾಶಾಂಧ್ರಾದಿದಿಶಿ ವಿಶದಂ ಶೋಭತೇ ವಾಗ್ಯಶೋಽಸ್ಯ || ೧೧ ||

ವಿಶದವಾದ ಬುದ್ಧಿಯೆಂಬುವ ಬಂಗಾರಕ್ಕೆ ಒರೆಗಲ್ಲಿನಂತಿರುವ ವಾರಾಣಸೀ (ಕಾಶೀ) ಕ್ಷೇತ್ರದಲ್ಲಿ, ಶ್ರೀಮನ್ನಾರಾಯಣದೇವರ ಕಾರುಣ್ಯಕ್ಕೆ ಕಾರಣವಾದ ಶ್ರೀ ಬದರೀಕ್ಷೇತ್ರದಲ್ಲಿ,

ಪೂರ್ವಪಶ್ಚಿಮಗಳಲ್ಲಿರುವ ಎಲ್ಲ ಶ್ರೇಷ್ಠ ನಗರಗಳಲ್ಲಿ, ಹಾಗು ತಮ್ಮದೇ ಆದ ಕರ್ನಾಟಕದೇಶದಲ್ಲಿ, ಮತ್ತು ಆಂಧ್ರದಲ್ಲಿ ಹಾಗೂ ದಕ್ಷಿಣದಿಕ್ಕಿನಲ್ಲಿ ಹೀಗೆ ಎಲ್ಲ ಕಡೆ ಆ ಆಚಾರ್ಯರ ವಾದದ ಯಶಸ್ಸು ಶೋಭಿಸುತ್ತಿದೆ.

ಚಂಡಕ್ಷ್ವೇಡಾಸದೃಶದೃಢವಾಗ್ಗೂಢತರ್ಕಪ್ರಚಂಡೇ
ರೀಢಾವ್ರೀಡಾನಿಗಡನತದುಷ್ಪಂಡಿತಸ್ತೇನತುಂಡೇ ॥
ಶೌಂಡವ್ಯಾಸಾರ್ಣವಭವಮಣೌ ತಾಂಡವೇ ಭೂಮಿಮಂಡೇ
ಕ್ರೀಡಾವ್ಯಾಡೇ ಹರಿನಟನವದ್ವ್ಯಾಡ ಪುರ್ಯ್ಯಾಸ ತಸ್ಯ ॥ ೧೨ ॥

ಭಯಂಕರವಾದ ಸಿಂಹಘರ್ಜನೆಯಂತಿರುವ ಸುದೃಢವಾಕ್ಯಗಳಲ್ಲಿ ನಿಗೂಢವಾದ ತರ್ಕಗಳಿಂದ ಪ್ರಚಂಡವೆನಿಸಿದ, ಉಪೇಕ್ಷೆ ಹಾಗು ನಾಚಿಕೆಯೆಂಬ ಬೇಡಿಯಿಂದ ದುಷ್ಟಪಂಡಿತರೆಂಬ ಚೋರರ ಮುಖವನ್ನು ಬಾಗಿಸಿದ, ಹಾಗು ಚತುರರಾದ ವ್ಯಾಸರಾಜರೆಂಬ ಸಮುದ್ರದಲ್ಲಿ ಹುಟ್ಟಿದ ಮಣಿಯಾದ, ಭೂಮಿಗೆ ಅಲಂಕಾರವಾದ 'ತರ್ಕತಾಂಡವ'ದ ವಿಷಯದಲ್ಲಿ, ಅನಂತಶಯನ ಕ್ಷೇತ್ರದಲ್ಲಿ ನಡೆದ ಆಚಾರ್ಯರ ಕ್ರೀಡೆಯು (ವಾದಲೀಲೆ) ಅನಂತನ (ಸರ್ಪದ)ಮೇಲೆ ಶ್ರೀಕೃಷ್ಣ ಪರಮಾತ್ಮನು ಕುಣಿದಂತೆ ಅದ್ಭುತವಾಗಿತ್ತು.

ವಾದೇ ವಿದ್ವದ್ವಿಪಿನದಹನೇ ದಿವ್ಯದಾವಾಗ್ನಿಮೇನಂ
ಪ್ರಾಮಾಣ್ಯೋಕ್ತಾವಸದೃಶದೃಶೋऽದಾರ್ಯಶೌರ್ಯೇಣ ಘೋರಮ್ ॥
ಧೀರಂ ಸ್ವೈರಂ ಸ್ವಪರಮತರೂಪಾರ್ಣವೋದ್ಯದ್ವಿಹಾರಂ
ನಂದಂ ಕುಂದಾಪುರಯತಿವರಃ ಪ್ರಾಪ ಪಶ್ಯನ್ನಮಂದಮ್ ॥ ೧೩ ॥

ವಾದದಲ್ಲಿ ದುರ್ವಿದ್ವಾಂಸರೆಂಬ ಕಾಡನ್ನು ಸುಡುವುದರಲ್ಲಿ ದಿವ್ಯ ಕಾಡ್ಗಿಚ್ಚಿನಂತಿರುವ ಆ ಆಚಾರ್ಯರು ಪ್ರಾಮಾಣ್ಯವಾದದಲ್ಲಿ ಅಸದೃಶವಾದ ಬುದ್ಧಿಯ ಹಿಮ್ಮೆಟ್ಟಿಸಲಾಗದ ಶೌರ್ಯದಿಂದ ಘೋರರಾಗಿದ್ದರು. ಧೀರರಾದ ಆ ಆಚಾರ್ಯರು ಸ್ವಮತ ಪರಮತಗಳೆಂಬ ಸಮುದ್ರದಲ್ಲಿ ಲೀಲಾಜಾಲವಾಗಿ ಯಥೇಚ್ಛವಾಗಿ ವಿಹರಿಸುತ್ತಿದ್ದರು. ಹೀಗೆ ಶೋಭಿಸುವ ಅವರನ್ನು ನೋಡಿ ಕುಂದಾಪುರ ವ್ಯಾಸರಾಜಮಠದ ಯತಿವರ್ಯರಾದ ಶ್ರೀಲಕ್ಷ್ಮೀಶತೀರ್ಥರು. ಅತೀವ ಆನಂದವನ್ನು ಹೊಂದಿದ್ದರು.

ಕಷ್ಟಾಕೃಷ್ಟಾನ್ ತದನಿಲಚಲದ್ವಕ್ಷಪಕ್ಷೇಷುನಷ್ಟಾನ್
ದೃಷ್ಟ್ವಾ ಘೃಷ್ಟ್ವಾ ನಿಜಬುಧಭಟಾನ್ ವಾದಯುದ್ಧಂ ಪ್ರವಿಷ್ಟೇ ॥
ರಾಜ್ಞೆ ಪ್ರಾಜ್ಞೋಗಣಿತಕಣಭುಕ್ಪಕ್ಷರಕ್ಷೈಕದೀಕ್ಷೆ
ತುಷ್ಟೋ ವಾದಕ್ಷುಧಿತವಿಬುಧೋ ವೀಕ್ಷ್ಯ ತೀಕ್ಷ್ಣಾರಿಭಕ್ಷ್ಯಮ್ ॥ ೧೪ ॥

ಆಗ ಅಲ್ಲಿ ಆ ಪುರದ ರಾಜನು (ಸ್ವತಃ ಮಹಾಪಂಡಿತನಾದ ಪರೀಕ್ಷಿತ್ ಎಂಬುವನು) ತನ್ನ ಆಸ್ಥಾನದ ಪಂಡಿತರೆಂಬ ಸೈನಿಕರು (ಭಟರು) ಆ ಆಚಾರ್ಯರ ವಾಯುಮಾರ್ಗದಲ್ಲಿ (ಮಧ್ವಮತ) ಬರುವ, ದಕ್ಷವಾದ ಪಕ್ಷ (ರೆಕ್ಕೆ) ವುಳ್ಳ ವಾಕ್ ಬಾಣಗಳಿಂದ ತತ್ತರಿಸಿಹೋಗಿದ್ದನ್ನು ಹಾಗೂ ಕಷ್ಟಪಡುತ್ತಿರುವುದನ್ನು ನೋಡಿ, ಕೋಪದಿಂದ ಸಹಿಸಲಾರದೇ ಸ್ವತಃ ತಾನೇ ಅಗಾಧವಾದ ಕಣಾದ (ತರ್ಕ) ಮತದ ರಕ್ಷಣೆಯ ದೀಕ್ಷೆತೊಟ್ಟು ವಾದಯುದ್ಧದಲ್ಲಿ ಧುಮುಕಿದನು. ಆಗ ವಾದದ ಹಸಿವೆಯುಳ್ಳ ಆ ಆಚಾರ್ಯರು ಭರ್ಜರಿ ಪ್ರತಿವಾದಿಯೆಂಬ ಭಕ್ಷ್ಯ ದೊರಕಿದ್ದನ್ನು ನೋಡಿ ಸಂತೋಷವುಳ್ಳವರಾದರು.

**ಚಾತುರ್ಯೇಣ ಸ್ವಪರವಚನೋಷರ್ಬುಧಜ್ವಾಲಯಾಽಲಂ**
**ತತ್ಪಕ್ಷಾಖ್ಯಂ ದಶಮುಖಪುರಂ ಸಂದಹನ್ನಾರ್ಯವರ್ಯಃ ॥**
**ತನ್ವನ್ನೇವಂ ತಮವನಿಪತಿಂ ವ್ಯಾಕುಲಂ ಮೂಕಲೀಲಂ**
**ಧನ್ಯಂ ತೇನೇ ಸ್ವಗತಮತುಲಂ ರಾಮದೂತಸ್ಯ ದೌತ್ಯಮ್** ॥ ೧೫ ॥

ಆಚಾರ್ಯವರ್ಯರಾದ ಶ್ರೀನಿವಾಸಾಚಾರ್ಯರು ಚಾತುರ್ಯದಿಂದ, ಸ್ವಮತ ಪರಮತಗಳ ವಾಕ್ಯಗಳೆಂಬ ಬೆಂಕಿಯ ಜ್ವಾಲೆಗಳಿಂದ ಆ ರಾಜನ ಪಕ್ಷವೆಂಬ ರಾವಣನ ಪಟ್ಟಣವನ್ನು ಸುಡುತ್ತ, ಆ ರಾಜನನ್ನು ಕಳವಳಗೊಳ್ಳುವಂತೆ, ಮಾತಿಲ್ಲದಂತೆ ಮಾಡುತ್ತ ಹಾಗೂ ತಮ್ಮಲ್ಲಿರುವ ರಾಮದೂತನ (ಮಧ್ವಾಚಾರ್ಯರ) ದೌತ್ಯವನ್ನು ಧನ್ಯವಾಗುವಂತೆ ಮಾಡಿದರು.

**ವಿದ್ವಂದ್ವಂದ್ವೇ ಯುಧಿ ಲಸತಿ ಧೀಶ್ಚಾಪಸರ್ಗೈರ್ನ್ಯಾಯ ಬಾಣೈಃ**
**ದ್ವೈತಾದ್ವೈತಾಭಿಧಗುರುಗದಾಯುದ್ಧಬದ್ಧೇಽಥ ಸರ್ವೈಃ ॥**
**ದೃಷ್ಟಃ ಶಿಷ್ಟಃ ಪಟುರಿಹ ಕಟಿಂ ಧಾರ್ತರಾಷ್ಟ್ರಸ್ಯ ಭಿಂದನ್**
**ಹುಂಕುರ್ವಾಣೋ ವಿಜಯವಿಲಸದ್ಭೀಮವತ್ ಭೀಮಸಂಧಃ** ॥ ೧೬ ॥

ಈ ಇಬ್ಬರು ವಿದ್ವಾಂಸರು ಆರಂಭದಲ್ಲಿ ಬುದ್ಧಿಯೆಂಬ ಬಿಲ್ಲಿನಿಂದ ಯುಕ್ತಿಗಳೆಂಬ ಬಾಣಗಳಿಂದ ಕದನ ನಡೆಸುತ್ತಿದ್ದರು. ಅನಂತರ ದ್ವೈತಾದ್ವೈತವೆಂಬ ದೊಡ್ಡ ಗದಾಯುದ್ಧದಲ್ಲಿ ಸನ್ನದ್ಧರಾಗಿಬಿಟ್ಟರು. ಆಗ ಶಿಷ್ಟರಾದ ಶ್ರೀ ಆಚಾರ್ಯರು, ಧೃತರಾಷ್ಟ್ರನ ಮಗನಾದ ದುರ್ಯೋಧನನನ್ನು ಸೀಳಿ ಪ್ರತಿಜ್ಞೆ ನೆರವೇರಿಸಿದ ವಿಜಯ (ಅರ್ಜುನ) ಸಹಿತರಾದ ಶ್ರೀ ಭೀಮಸೇನದೇವರಂತೆ, ಹೂಂಕರಿಸುತ್ತಾ ಆ ವಾದಿಯನ್ನು (ರಾಜನನ್ನು) ಸೋಲಿಸಿ ವಿಜಯಿಗಳಾದರು.

**ಮಾಧ್ವೋದ್ಯದ್ವಿಜಯಧ್ವಜೇನ ಸುಜನಾನಂದಪ್ರದೇನೇಂದಿರಾ -**
**ನೇತ್ರಾಂಭೋಜವಿಧುಂ ಭುಜಙ್ಗಶಯನಂ ಭಕ್ತ್ಯಾ ಭಜನ್ ಭೂಸುರಃ ॥**
**ರಾಜದ್ರಾಜಸಭಾಜನಂ ಬಹುವಿಧಂ ನಾಂಗೀಚಕಾರೇತಿ ಕಿಂ**
**ಚಿತ್ರಂ ಯತ್ರ ಪುರೈವ ದುರ್ಲಭಜಗದ್ರಾಜಪ್ರಸಾದೋಽಜನಿ** ॥ ೧೭ ॥

ಸಜ್ಜನರಿಗೆಲ್ಲ ಆನಂದತರುವ ಮಾಧ್ವರ (ಮಧ್ವಸಿದ್ಧಾಂತದ) ವಿಜಯವೆಂಬ ಧ್ವಜದಿಂದ, ಇಂದಿರಾದೇವಿಯ ಕಣ್ಣುಗಳೆಂಬ ನೈದಿಲೆಗಳಿಗೆ ಚಂದ್ರನಂತಿರುವ ಅನಂತಶಯನನಾದ ಶ್ರೀಹರಿಯನ್ನು ಭಕ್ತಿಯಿಂದ ಸೇವಿಸುವ ಆ ಬ್ರಾಹ್ಮಣಶ್ರೇಷ್ಠರಾದ ಶ್ರೀನಿವಾಸಾಚಾರ್ಯರು ಆ ರಾಜನ ಬಹುವಿಧವಾದ ರಾರಾಜಿಸುವ ಗೌರವವನ್ನು ಸ್ವೀಕರಿಸದಿರುವುದು ಆಶ್ಚರ್ಯವೆನಿಸಲಿಲ್ಲ. ಏಕೆಂದರೆ ಬಹಳ ದುರ್ಲಭವಾದ, ಜಗದ್ರಾಜನಾದ ಪರಮಾತ್ಮನ ಅನುಗ್ರಹವು ಶ್ರೀ ಆಚಾರ್ಯರಿಗೆ ಮೊದಲೇ ಪ್ರಾಪ್ತವಾಗಿ ಬಿಟ್ಟಿತ್ತು.

ವಿದ್ವಚ್ಛಬ್ದಧರಾ ಧರಾತಲಗತಾ ಭಾರಾ ಭುವಃ ಕೇವಲಂ
ದುರ್ವಾಗ್ಘೋರತರಾರಿವಾರಹರಣಾಽಶಕ್ತಾಂತರಾಸ್ಸಂತಿ ಯೇ ॥
ಕ್ಷೋಣೇರ್ಭೂಷಣಮಿಷ್ಯತೇ ಶುಭಜನೈರ್ದುಷ್ಟಪಕ್ಷಶಿಕ್ಷಾಪ್ರಸತ್ -
ಪಕ್ಷೀಶಪ್ರಿಯಸಾತ್ವಿಕಾರ್ಯತನಯಾರ್ಯಾದ್ಯಂ ಹಿ ವಿದ್ವತ್ಕುಲಂ ॥ ೧೮ ॥

ದುರ್ವಾದಗಳೆಂಬ ಭಯಂಕರ ಶತ್ರುಗಳ ಹಿಂಡನ್ನು ಸಂಹರಿಸುವುದರಲ್ಲಿ ಅಸಮರ್ಥವಾದ ಮನಸ್ಸುಳ್ಳ 'ವಿದ್ವಾನ್' ಎಂಬ ಹೆಸರು ಹೊತ್ತವರು ಭೂಮಿಯಲ್ಲಿರುವರೆನ್ನುವುದಕ್ಕಿಂತ ಕೇವಲ ಭೂಮಿಗೆ ಭಾರರೆನ್ನಬೇಕು. ಆದರೆ ದುಷ್ಟಪಕ್ಷಗಳನ್ನು ಶಿಕ್ಷಿಸಿ ಪಕ್ಷಿ (ಗರುಡ) ಗೊಡೆಯನಾದ ಪರಮಾತ್ಮನನ್ನು ಸಂತೋಷಪಡಿಸುವ ಶ್ರೀಸಾತ್ವಿಕಾಚಾರ್ಯರ ಪುತ್ರರಾದ ಶ್ರೀನಿವಾಸಾಚಾರ್ಯರೇ ಮೊದಲಾದ ವಿದ್ವವೃಂದವು ಭೂಮಿಗೆ ಭೂಷಣವೆಂದು ಸಜ್ಜನರು ಅಭಿಮತಿಪಡುತ್ತಾರಷ್ಟೆ.

ತೀರ್ಥಕ್ಷೇತ್ರನಿಷೇವಣಾಭಿಧಮಿಷೇಣಾಕ್ಷೀಣವಿದ್ಯಾಧರಃ
ದುರ್ವಾದಾರಿವಿದಾರಣಾರ್ಥಮವನೌ ಸಂಚಾರಭಾರಾಶ್ರಯಃ ॥
ಸಂಪ್ರಾಪ್ತಾಖಿಲವಾದತೂಲದಹನಂ ತನ್ವನ್ ಗುರೋಸ್ತೋಷಣಂ
ರೇಜೇಽಲಂ ಜ್ವಲನಪ್ರಭೋ ಜಗತಿ ಸದ್ವಾತಾಗಮಪ್ರೋಜ್ವಲಃ ॥ ೧೯ ॥

ಕರಗದಿರುವಷ್ಟು ವಿದ್ಯೆಯನ್ನು ಧರಿಸಿರುವ ಆ ಆಚಾರ್ಯರು ತೀರ್ಥಕ್ಷೇತ್ರಗಳ ಸೇವೆಯೆಂಬ ನೆಪದಿಂದ, ದುರ್ವಾದಗಳೆಂಬ ಶತ್ರುಗಳನ್ನು ಸಂಹರಿಸುವುದಕ್ಕೋಸ್ಕರ ಭೂಮಿಯಲ್ಲಿ ಸಂಚಾರದ ಭಾರವನ್ನು ಹೊತ್ತು, ಅಲ್ಲಲ್ಲಿ ಸಿಗುವ ಎಲ್ಲ ವಾದಗಳೆಂಬ ಹತ್ತಿಯನ್ನು ಸುಡುತ್ತ, ಗುರುಗಳಾದ ತಂದೆಯವರನ್ನು ಹಾಗೂ ಶ್ರೀಸತ್ಯಧ್ಯಾನತೀರ್ಥರನ್ನು ಸಂತೋಷಪಡಿಸುತ್ತ, ಶ್ರೇಷ್ಠವಾದ ವಾತಾಗಮ (ಮಧ್ವಶಾಸ್ತ್ರವೆಂಬ ಗಾಳಿಯ ಆಗಮನ)ದಿಂದ ಉಜ್ವಲರಾಗಿ ಬೆಂಕಿಯಂತೆ ಪ್ರಕಾಶಿಸುತ್ತ ಜಿಸಿದರು.

ದ್ವಾದಾರುಣಪೂಷಣೇಕ್ಷಣವಿಹೀನಾಕ್ಷಾ ಭಣಂತೋ ಮೃಷೇ -
ೀವಂ ತಂ ಚ ಹಸಂತು ಘೂಕಸದೃಶಾಃ ಕಾ ತೇನ ಹಾನಿರ್ಭವೇತ್ ॥

**ನೂನಂ ತಸ್ಯ ಹಿ ಘೋರವಾದವಿಲಸದ್ಧರ್ಯಕ್ಷಲೀಲೇಕ್ಷಣೆ**
**ಆದರ್ಶಾ ಇಹ ಸಂತಿ ಸಾಕ್ಷಿಣ ಇವ ಗ್ರಂಥಾ ಮಹಾಂತೋಽಧುನಾ ॥ ೨೦ ॥**

ಗೂಗೆಯಂತೆ ಮದಾಂಧರಾದ ಕೆಲವು ಅಸಜ್ಜನರು ಆ ಆಚಾರ್ಯರ ವಾದವೆಂಬ ಕೆಂಪಾದ ಸೂರ್ಯನನ್ನು ನೋಡಲು ಕಣ್ಣಿಲ್ಲದವರಾಗಿ "ಅದೆಲ್ಲ ಸುಳ್ಳು" ಎಂದು ಕೂಗುತ್ತಾ ಅಪಹಾಸಮಾಡಿದರೆ ಮಾಡಲಿ. ಅದರಿಂದ ಹಾನಿಯೇನಾಗುತ್ತದೆ? ಆ ಆಚಾರ್ಯರ ಘೋರವಾದ ವಾದವೆಂಬ ವಿರಾಜಿಸುವ ಸಿಂಹದ ಪರಾಕ್ರಮವನ್ನು ನೋಡಲು ಆ ಆಚಾರ್ಯರ ಬೃಹತ್ ಗ್ರಂಥಗಳು ಕನ್ನಡಿಯಂತೆ ಈಗಲೂ ಸಹ ಸಾಕ್ಷೀಭೂತವಾಗಿ ಉಪಲಬ್ಧವಾಗುತ್ತಿವೆ.

ಇಲ್ಲಿಂದ ಆಚಾರ್ಯರ ಗ್ರಂಥವರ್ಣನೆ ಪ್ರಾರಂಭವಾಗುತ್ತದೆ : -

**ಶ್ರೀಮನ್ನ್ಯಾಯಾಮೃತಾಖ್ಯಾಮೃತಮಮರತರುಸ್ತತ್ತರಂಗಿಣ್ಯುಪಾಹ್ವಃ**
**ಯತ್ರಾಮೋದದ್ಯುಧೇನುಃ ಪರತಿಮಿರಹರಃ ಕಂಟಕೋದ್ಧಾರಚಂದ್ರಃ ॥**
**ಮಧ್ವೋಕ್ತಿಶ್ರೀಶರಾಜದ್ವಿಜಯರಥವಹದ್ದಿವ್ಯಸೌಗಂಧ್ಯವಾಹಃ**
**ತದ್ಧೀವಾರ್ಧೌ ಸುಧಾಽಪ್ಯರ್ಣವ ಇವ ಪಯಸಾಮರ್ಣವೋ ಭಾತಿ ನವ್ಯಃ ॥೨೧ ॥**

ಶ್ರೀಮನ್ನ್ಯಾಯಾಮೃತವೆಂಬುವ ಅಮೃತ, ನ್ಯಾಯಾಮೃತ ತರಂಗಿಣಿಯೆಂಬ ದೇವತೆಗಳ ವೃಕ್ಷ (ಕಲ್ಪವೃಕ್ಷ), ಆಮೋದವೆಂಬ ಸ್ವರ್ಗದ ಆಕಳು (ಕಾಮಧೇನು), ಪರವಾದಿಗಳೆಂಬ ಕತ್ತಲೆಯನ್ನು ಸೀಳುವ ಕಂಟಕೋದ್ಧಾರವೆಂಬ ಚಂದ್ರ, ಹಾಗೂ ಮಧ್ವಾಚಾರ್ಯರ ಉಕ್ತಿ (ವಾಕ್ಯ ) ಗಳೆಂಬ ಲಕ್ಷ್ಮೀದೇವಿಗೆ ಪತಿಯಾದ ಶ್ರೀಹರಿಯ ವಿಜಯರಥವನ್ನು ಹೊತ್ತಿರುವ ಸೌಗಂಧ್ಯವೆಂಬ ದೇವತೆಗಳ ಕುದುರೆ (ಉಚ್ಚೈಶ್ರವ) ಇವೆಲ್ಲ ಎಲ್ಲಿ ಲಭ್ಯವಾಗಿದೆಯೋ, ಅಂಥ ನ್ಯಾಯಾಮೃತಾರ್ಣವ ಎಂಬ ಗ್ರಂಥವು ಆ ಆಚಾರ್ಯರ ಬುದ್ಧಿಯೆಂಬ ಸಮುದ್ರದಲ್ಲಿ ಅಮೃತದಂತಿದ್ದರೂ ಅಮೃತಾದಿಪ್ರದವಾದ ಕ್ಷೀರ ಸಮುದ್ರದಂತೆ ಶೋಭಿಸುತ್ತಿದೆ.

**ಸೌಗಂಧ್ಯಂ ಸಾಧುವಂದ್ಯಂ ಕುಮತತತಿಹತೌ ಹೇತಿಭೂತೋಕ್ತಿಹೇತು**
**ಸಂತಹುರ್ತುಂ ರಂಹಸಾಗ್ನಿಂ ಪತಗ ಇವ ಪರಿಷ್ವಜ್ಯ ತಜ್ಜ್ವಾಲಯಾಽಲಂ ॥**
**ದಗ್ಧಾಪ್ತಾನಂತಕೃಷ್ಣಾಭಿಧವಿಬುಧಗಲಂ ಗೋಭಿರಾಹತ್ಯ ದಿಗ್ಭ್ಯಃ**
**ಕಾರ್ಷ್ಣ್ಯಸ್ಯಾನಂತ್ಯಮಾಸ್ಯೇ ಸ ವಿದಧದಭವನ್ನಾಮಧನ್ಯತ್ವಹೇತುಃ ॥ ೨೨ ॥**

ಸಜ್ಜನರಿಂದ ಸ್ತುತ್ಯವಾದ ಶ್ರೀನ್ಯಾಯಾಮೃತಸೌಗಂಧ್ಯವು ಕುಮತಗಳ ಹಿಂಡನ್ನು ಸುಡುವಲ್ಲಿ ಜ್ವಾಲೆಗಳಂತಿರುವ ಉಕ್ತಿ (ಮಾತು) ಯುಕ್ತಿಗಳಿಂದ ತುಂಬಿರುವ ಅಗ್ನಿಯಂತಿದೆ. ಆ ಅಗ್ನಿಯನ್ನು ನಾಶಮಾಡಬೇಕೆಂದು ವೇಗವಾಗಿ ಪತಂಗಹುಳುವಿನಂತೆ ಹಿಡಿದುಕೊಂಡು, ಆ ಅಗ್ನಿಯ ಜ್ವಾಲೆಗಳಿಂದ

ಬಹಳ ಸುಟ್ಟುಕೊಂಡು ಒಬ್ಬ ಪಂಡಿತನು 'ಅನಂತಕೃಷ್ಣ' ಎಂಬ ಹೆಸರುಳ್ಳವನಾದನು. ಈ ಅನಂತಕೃಷ್ಣಶಾಸ್ತ್ರಿಯ ಕಂಠಕ್ಕೆ ವಿಷಪೂರ್ಣವಾದ ಮಾತುಗಳೆಂಬ ಬಾಣಗಳಿಂದ ಹೊಡೆದು ಅವನ ಮುಖದಲ್ಲಿ ಕಪ್ಪು ಬಣ್ಣವನ್ನು ಅನಂತವನ್ನಾಗಿ ಮಾಡಿ, ಆ ಆಚಾರ್ಯರು ಅವನ 'ಅನಂತಕೃಷ್ಣ' ಎಂಬ ಹೆಸರು ಅನ್ವರ್ಥವಾಗಲು ಕಾರಣರಾದರು.

ಮಾಯಾವಾದಾಭಿಧಾಬ್ಧಿಪ್ರಭಭಯದಬಲೇಽದ್ವೈತಸಿದ್ಧ್ಯಾಖ್ಯಮುಗ್ರಂ
ಬ್ರಹ್ಮಾನಂದ್ಯಾದಿನಾನಾಲಘುಗುರುವಿವೃತಿವ್ಯೂಹಬದ್ಧೇ ನಿಗೂಢಂ ||
ಸಿಂಧ್ವೀಶಂ ಧ್ಯಾನಕೃಷ್ಣೋದಿತಸುಪಥಗತೋ ನಾಶಯನ್ನೇಷ ರೇಜೇ
ಸಮ್ರಾಟ್‌ಸತ್ಯಪ್ರಜ್ಞಮಾನ್ಯೋಽರ್ಜುನ ಇವ ನೃವನಾಥ್ಯಕ್ಷಭೀಮಾಕ್ಷಿರಕ್ಷಃ ||೨೩||

'ಬ್ರಹ್ಮಾನಂದೀ'ಮೊದಲಾದ ನಾನಾವಿಧವಾದ ಸಣ್ಣದು ದೊಡ್ಡದು ಎನಿಸಿದ ವ್ಯಾಖ್ಯಾನಗಳೆಂಬ ವ್ಯೂಹವುಳ್ಳ, ಸಮುದ್ರದಂತಿರುವ ಭಯಂಕರವಾದ, ಅದ್ವೈತಮತವೆಂಬ ಸೇನೆಯಲ್ಲಿ ಅಡಗಿರುವ, ಅದ್ವೈತಸಿದ್ಧಿಯೆಂಬ ಕ್ರೂರಿಯಾದ ಸಿಂಧುರಾಜನನ್ನು (ಜಯದ್ರಥನನ್ನು) ಶ್ರೀಸತ್ಯಧ್ಯಾನತೀರ್ಥರೆಂಬ ಕೃಷ್ಣಪರಮಾತ್ಮನು ತಿಳಿಸಿದ ಮಾರ್ಗದಲ್ಲಿ ನಡೆದುಕೊಂಡು ಹೋಗಿ ಸಂಹಾರಮಾಡಿದ ಈ ಶ್ರೀನಿವಾಸಾಚಾರ್ಯರು, ಸತ್ಯಪ್ರಜ್ಞತೀರ್ಥರೆಂಬ ಚಕ್ರವರ್ತಿ ಯುಧಿಷ್ಠಿರ ಮಹಾರಾಜನಿಂದ ಮಾನ್ಯರಾಗಿ, ವರಖೇಡಿ ನರಸಿಂಹಾಚಾರ್ಯರೆಂಬ ಭೀಮಸೇನದೇವರ ನೋಟದಿಂದ ರಕ್ಷಿತರಾಗಿ, ಅರ್ಜುನನಂತೆ ವಿರಾಜಿಸಿದರು.

ದ್ವೈತಾದ್ವೈತಾಹವಾಂತಸ್ಸ್ಥಿತಬುಧಧಿಷಣಾಹ್ರಾದಿನೀ ಯಂ ನ ಯಾಂತೀ
ಮಿಥ್ಯಾಧೀಪಙ್ಕಪೂರ್ಣಹ್ರದ ಇವ ಜಡತಾಪೂರಿತಾ ಸಾಂಪ್ರತಂ ಸ್ಯಾತ್ ||
ತಸ್ಮಾತುಲ್ಯಾರ್ಣವಸ್ಯ ಪ್ರಣತಿರಿಯಮಹೋ ಧೀರವರ್ಯಪ್ರಪಂಚೇ
ಸತ್ಯಧ್ಯಾನಾರ್ಯಕೀರ್ತೇರ್ಲಸದಮೃತಶಿಲಾಶಾಸನಾಭಾ ವಿಭಾತಿ || ೨೪ ||

ದ್ವೈತಾದ್ವೈತವಾದವೆಂಬ ಯುದ್ಧದಲ್ಲಿ ಸನ್ನದ್ಧರಾದ ವಿದ್ವಾಂಸರ ಬುದ್ಧಿಯೆಂಬ ನದಿಯು ಆ 'ನ್ಯಾಯಾಮೃತಾರ್ಣವ' ಎಂಬ ಸಮುದ್ರದವರೆಗೆ ಪ್ರವಹಿಸಲೇಬೇಕು. ಇಲ್ಲದಿದ್ದರೆ ಆ ಬುದ್ಧಿಯು ಹ್ರಾದಿನೀ (ನದಿಯು) ಆಗಲಾರದು. ಮತ್ತು ಮಿಥ್ಯಾಜ್ಞಾನವೆಂಬ ಕೆಸರಿನಿಂದ ತುಂಬಿದ ಹ್ರದದಂತೆ (ಮಡುವಿನಂತೆ) ಜಡವಾಗುತ್ತದೆ. ಇದು ಸಾಂಪ್ರತ ಪರಿಸ್ಥಿತಿ. ಆದ್ದರಿಂದ ನ್ಯಾಯಾಮೃತಾರ್ಣವವು ಸರ್ವಸಂಗ್ರಾಹ್ಯವಾಗಿದೆ. ಅಸದೃಶವಾದ ಅಂಥ ಶ್ರೀನ್ಯಾಯಾಮೃತಾರ್ಣವದ ರಚನೆಯು ಪಂಡಿತಪ್ರಕಾಂಡರ ಪ್ರಪಂಚದಲ್ಲಿ ಶ್ರೀಸತ್ಯಧ್ಯಾನತೀರ್ಥರ ಯಶಸ್ಸನ್ನು ಅಮೃತ ಶಿಲೆಯಲ್ಲಿ ಬರೆದ ಶಾಸನದಂತೆ ತೋರುತ್ತಿದೆ.

ದೃಷ್ಟ್ವಾ ಸೀತಾಂ ಕುದೃಷ್ಟ್ಯಾ ವಿತತಮತಿಮತಶ್ರೀಶಭಕ್ತಾಂ ಸುಧಾಖ್ಯಾಂ
ಕ್ಲೇಷಂ ದಾತುಂ ವೃಥಾ ತಚ್ಛುಭದಯಹೃದಯಸ್ಯಾಗತಸ್ಯಾಸುರಸ್ಯ ॥
ಕಾಕಸ್ಯಾನಂತಕೃಷ್ಣಾಭಿಧಕುರವಕರಸ್ಯಾಕ್ಷಿಯುಗ್ಮಕ್ಷಯಸ್ಯ
ಹೇತುರ್ಹೇತಿದ್ವಯಾಭಂ ಜಗತಿ ವಿಜಯತೇ ಕಂಟಕೋದ್ಧಾರಯುಗ್ಮಮ್ ॥೨೫॥

ಶ್ರೀ ಪೂರ್ಣಪ್ರಜ್ಞಾಚಾರ್ಯರ ಮತವೆಂಬ ಶ್ರೀರಾಮಚಂದ್ರನಲ್ಲಿ ಭಕ್ತಿಯುಳ್ಳ 'ಶ್ರೀಮನ್ನ್ಯಾಯಸುಧಾ' ಎಂಬ ಸೀತಾದೇವಿಯನ್ನು ಕೆಟ್ಟ ದೃಷ್ಟಿಯಿಂದ ನೋಡಿ, ಸಜ್ಜನರಲ್ಲಿ ದಯೆಯುಳ್ಳ ಅವಳ ಹೃದಯಕ್ಕೆ ವೃಥಾ ಕ್ಲೇಶ ಕೊಡಬೇಕೆಂದು ಬಂದ 'ಅನಂತ ಕೃಷ್ಣ' ಎಂಬುವ ಕೆಟ್ಟದಾಗಿ ಕೂಗುವ ಕಪ್ಪಾದ ಕಾಕಾಸುರನ, ಎರಡು ಕಣ್ಣುಗಳನ್ನು ಎರಡು ಆಯುಧಗಳಂತೆ, ನಾಶಮಾಡುವ ಆ ಆಚಾರ್ಯರ 'ಶ್ರೀಮನ್ನ್ಯಾಯಸುಧಾ ಕಂಟಕೋದ್ಧಾರ' ವೆಂಬ ಎರಡು ಕೃತಿಗಳು ಜಗತ್ತಿನಲ್ಲಿ ವಿರಾಜಿಸುತ್ತಿವೆ.

ದುರ್ಭಾಷಾಧ್ವಾಂತಗೂಢಂ ಬುಧಸುಖದಸುಧಾಮಂಡನಗ್ರಂಥರತ್ನಮ್
ಧ್ವಸ್ತಧ್ವಾಂತಾ ಜ್ವಲಂತೀ ನಿಜವಿಜಯದವಾಗ್ಜ್ಯೋತಿಷಾ ದರ್ಶಯಂತೀ ॥
ಸನ್ಮೋದಂ ವರ್ಧಯಂತೀ ಕೃತಿರನಲತುಲಾ ಕಂಟಕೋದ್ಧಾರನಾಮ್ನೀ
ಧತ್ತೇಽಪ್ಯನ್ಯಾ ಧರಿತ್ರ್ಯಾಂ ದಹನವಿಧಿಮಹೋ ದುರ್ಮತಾನಾಂ ಮೃತಾನಾಂ ॥೨೬॥

ವಿದ್ವಾಂಸರಿಗೆ ಆನಂದಪ್ರದವಾದ 'ಶ್ರೀನ್ಯಾಯಸುಧಾಮಂಡನ'ವೆಂಬ ಗ್ರಂಥರತ್ನವು ದುರ್ವಾದಿಗಳ ಖಂಡನೆಯೆಂಬ ಕತ್ತಲೆಯಿಂದ ಮುಚ್ಚಿಹೋದಾಗ ಬೆಂಕಿಯಂತಿರುವ ಕಂಟಕೋದ್ಧಾರವೆಂಬ ಹೆಸರುಳ್ಳ ಆಚಾರ್ಯರ ಮತ್ತೊಂದು ಕೃತಿಯು ಪ್ರಜ್ವಲಿಸುತ್ತ, ಆ ದುರ್ವಾದವೆಂಬ ಕತ್ತಲೆಯನ್ನು ಕತ್ತರಿಸುತ್ತ, ತನ್ನ ವಿಜಯಪ್ರದವಾದ ಮಾತುಗಳೆಂಬ ಪ್ರಕಾಶದಿಂದ ಆ 'ನ್ಯಾಯಸುಧಾಮಂಡನ' ವೆಂಬ ಗ್ರಂಥರತ್ನವನ್ನು ಎಲ್ಲರಿಗೂ ಕಾಣುವಂತೆ ಮಾಡಿ, ಸನ್ಮೋದವನ್ನು (ಸಜ್ಜನರಿಗೆ ಆನಂದವನ್ನು ಹಾಗು ಶ್ರೀಸತ್ಯಪ್ರಮೋದತೀರ್ಥರನ್ನು)! ಅಭಿವೃದ್ಧಿಗೊಳಿಸುತ್ತಿದೆ. ಅಷ್ಟೇ ಅಲ್ಲದೇ ಆ ಬೆಂಕಿಯು ಮೊದಲೇ ಶ್ರೀಟೀಕಾಚಾರ್ಯ ಪ್ರಭೃತಿಗಳಿಂದ ಸೋತು ಮೃತರಾದ ಆ ದುರ್ಮತಗಳಿಗೆ ದಹನ ಸಂಸ್ಕಾರವನ್ನು ಮಾಡುತ್ತಿದೆ. (ಅಂದರೇ ದುರ್ಮತವನ್ನು ಚೆನ್ನಾಗಿ ಖಂಡಿಸುತ್ತಿದೆ ಎಂದು ಭಾವ).

ಭಿಂದನ್ ಪೌಢಪ್ರಬಂಧತ್ರಯಪದಭಯದೋಗ್ರತ್ರಿಶೂಲಾಗ್ರತೋಟಿಲಂ
ಮಾಯೀಶಾನಂತಕೃಷ್ಣಂ ತ್ರಿವಿಧಮಥ ಪರಿಚ್ಛೇದಮಸ್ಮಿಂಶ್ಚ ಯಚ್ಛನ್ ॥
ಪ್ರಾಪ್ತಂ ಸ್ವಪ್ನೇಽಪ್ಯನಾಪ್ಯಂ ಚ್ಯುತವಚನಪರಿಚ್ಛೇದಚಿದ್ ಬ್ರಹ್ಮಭಾವಂ
ತದ್ಯುಕ್ತ್ಯೈವಾನ್ನತೇಶಂ ಸ ಚ ವಿದಧದಗಾಚ್ಛತ್ರುತಾಂ ಮಿತ್ರತಾಂ ಚ ॥ ೨೭ ॥

ಆ ಆಚಾರ್ಯರು ಪ್ರೌಢವಾದ ತಮ್ಮ ಮೂರು ಪ್ರಬಂಧಗಳೆಂಬ ಭಯಂಕರವಾದ ತ್ರಿಶೂಲದ ತುದಿಯಿಂದ ಅದ್ವೈತಿಗಳಿಗೊಡೆಯನಾದ ಅನಂತಕೃಷ್ಣಶಾಸ್ತ್ರಿಯನ್ನು ಸೀಳುತ್ತ, ಆ ಶಾಸ್ತ್ರಿಯಲ್ಲಿ ಮೂರೂ ವಿಧವಾದ ಪರಿಚ್ಛೇದ ನೀಡಿದರು. ಸ್ವಪ್ನದಲ್ಲಿಯೂ ಸಿಗಲಾರದ ಅನಿರ್ವಾಚ್ಯ ಅಪರಿಚ್ಛಿನ್ನ ಚೈತನ್ಯನಾದ ಅದ್ವೈತಬ್ರಹ್ಮನ ಐಕ್ಯ ವಿಶಿಷ್ಟನಾದ ಆ ಅನಂತಕೃಷ್ಣಶಾಸ್ತ್ರಿಯನ್ನು ಅವನ ಯುಕ್ತಿಯಿಂದಲೇ (ಪರಿಚ್ಛಿನ್ನತ್ವಯುಕ್ತಿಯಿಂದ) ಸುಳ್ಳಿನ ದೊರೆಯನ್ನಾಗಿಸಿದರು. ಇದರಿಂದ ಆ ಅನಂತ ಕೃಷ್ಣಶಾಸ್ತ್ರಿಗೆ ಆ ಆಚಾರ್ಯರು ಶತ್ರುವಿನಂತೆಯೂ ಹಾಗೂ ಮಿತ್ರನಂತೆಯೂ ಆಗಿದ್ದರು.

**ಸಂದೇಹಾಜ್ಞಾನಮಿಥ್ಯಾವಿದನಲವಲಯಜ್ವಾಲಸಂತಾಪಶಾಪೇ**
**ದುರ್ಮಾರ್ತಾಂಡೇ ಪ್ರಚಂಡೇ ಕಲಿಮಲಮಲಿನೇ ಭೂತಲೇ ಘೋರಕಾಲೇ ॥**
**ಆಯಾಂತೀ ಗ್ರೀಷ್ಮತೀಯಂ ಕೃತಿಶರದಸತಾಂ ಚಾರುಚರ್ಚಾಬ್ಧಿಜೋದ್ಯ -**
**ದ್ವಿದ್ಯಾವಾತಾಗಮೇತಾ ಹತಕುಮತತಮಶ್ಚಂದ್ರಿಕಾವ್ಯಾಪ್ತನಾಕಾ ॥ ೨೮ ॥**

ಸಂದೇಹ ಅಜ್ಞಾನ ವಿಪರೀತ ಜ್ಞಾನವೆಂಬ ಸುತ್ತುವರೆದಿರುವ ಬೆಂಕಿಯ ಜ್ವಾಲೆಗಳಿಂದಾಗುವ ಸಂತಾಪ (ಬಿಸಿ) ವೆಂಬ ಶಾಪವುಳ್ಳ, ಕಲಿಯ ದೋಷದಿಂದ ಕಲುಷಿತಗೊಂಡ ಘೋರಕಾಲದಲ್ಲಿ ಭೂಮಂಡಲದಲ್ಲಿ ದುಷ್ಟನಾದ ಮಾರ್ತಾಂಡ (ಸೂರ್ಯ-ತತ್ವಮಾರ್ತಾಂಡವೆಂಬ ಗ್ರಂಥ) ಪ್ರಚಂಡನಾಗಿದ್ದಾಗ ಆಗಮಿಸಿದ ಆ ಆಚಾರ್ಯರ ಕೃತಿಯೆಂಬ ಶರದೃತುವು, ಸುಂದರ ಚರ್ಚೆಯೆಂಬ ಸಮುದ್ರದಲ್ಲಿ ಉದಯಿಸಿದ ವಿದ್ಯೆಯೆಂಬ ವಾತಾಗಮ (ಮಧ್ವಶಾಸ್ತ್ರ - ಗಾಳಿಯ ಆಗಮನ) ದಿಂದ ಕೂಡಿಕೊಂಡು, ದುರ್ಮತಗಳೆಂಬ ಕತ್ತಲೆಯನ್ನು ನಾಶಮಾಡುವ ಚಂದ್ರಿಕೆಯಿಂದ (ಶ್ರೀ ವ್ಯಾಸರಾಜರ ಚಂದ್ರಿಕಾಗ್ರಂಥವೆಂಬ ಬೆಳದಿಂಗಳಿಂದ) ಆಕಾಶವನ್ನೆಲ್ಲ ವ್ಯಾಪಿಸಿ ಸಜ್ಜನರಿಗೆ ಆನಂದನೀಡುತ್ತಿದ್ದರೂ, ದುರ್ಜನರಿಗೆ ತಾಪಕೊಡುವುದರಲ್ಲಿ ಆ ಕೃತಿಯೆಂಬ ಶರದೃತುವು ಗ್ರೀಷ್ಮಋತುವೇ ಆಗಿತ್ತು.

**ಮಾರ್ತಾಂಡೇಽಪ್ಯಕ್ರಮೇಣ ಪ್ರಕಟಿತುಮುಪಟಾವುದ್ಯತೇಽದ್ಯಾಪಿ ದೂರೇ**
**ಚಿಂತಾತಾಪಾದಿನಾನಾಮಲಹರಶರದೋಽಪ್ಯಾಗಮೇ ಸಾಗಮಾ ಸಾ ॥**
**ಪಂಚಮ್ಯಾಃ ಪಂಚಕೇಽಹ್ನಾಮನುಚಿತವಚಸಾಂ ಪಂಚತಾಮಂಚಯಂತೀ**
**ವ್ಯಾಸಪ್ರಾರ್ಚಾಪ್ರಪಂಚಾ ಶರದಿತಪುರುಷಪ್ರೋತ್ತಮಾಽಽಸ್ತೇಽಧಿಕರ್ತುಃ ॥೨೯॥**

ತತ್ವಮಾರ್ತಾಂಡನೆಂಬ ಮಾರ್ತಾಂಡನು (ಸೂರ್ಯನು) ಅಕ್ರಮವಾಗಿ (ಈಗ ನನ್ನನ್ನು ಖಂಡಿಸುವವರು ಯಾರೂ ಇಲ್ಲವೆಂಬ ಬುದ್ಧಿಕ್ರಮದಿಂದ - ಸಂಕ್ರಮಣವಿಲ್ಲದೇ) ಪ್ರಕಟನಾಗಲು ಉದ್ಯುಕ್ತನಾದಾಗ, ಚಿಂತಾ ತಾಪಾದಿ ಮಲಗಳನ್ನು ಪರಿಹರಿಸುವ ಶ್ರೀ ವ್ಯಾಸತತ್ವಜ್ಞತೀರ್ಥರು ರಚಿಸಿದ 'ಶರದಾಗಮ' ಗ್ರಂಥವೆಂಬ ಶರದೃತುವಿನ ಆಗಮನವು (ಪ್ರಕಾಶನವು) ಇನ್ನೂ ದೂರದಲ್ಲೇ ಇದ್ದಾಗ, ಪಂಚಮಿಯಿಂದ (ಆಶ್ವಿನ ಶುದ್ಧ ಪಂಚಮಿಯಿಂದ) ಆರಂಭಿಸಿ ಪಂಚದಿನಗಳಲ್ಲಿ

(ವಿಜಯದಶಮಿಯಲ್ಲಿ) ಆಗಮಿಸಿದ ಆಚಾರ್ಯರ 'ಅಭಿನವಶರದಾಗಮ' ಗ್ರಂಥವೆಂಬ ಶರದೃತುವು ಅನುಚಿತವಾದ ತತ್ವಮಾರ್ತಾಂಡದ ವಚನಗಳಿಗೆ ಪಂಚತ್ವ (ಮರಣ)ವನ್ನು ಹೊಂದಿಸಿ, ಶ್ರೀ ವ್ಯಾಸರಾಜರೆಂಬ ವೇದವ್ಯಾಸದೇವರ ಪೂಜೆಯನ್ನು ವಿಸ್ತಾರದಿಂದ ನೆರವೇರಿಸಿ ಪುರುಷೋತ್ತಮನೇ (ಶ್ರೀ ಹರಿಯೇ) ನಿತ್ಯವೂ ಸರ್ವೋತ್ತಮನೆಂದು ಸಾರುತ್ತ, ಅಧಿಕ ಋತುವಿನಂತೆ ವಿರಾಜಿಸುತ್ತಿದೆ.

ಮಾಲಾ ಕೀಲಾಲನಿಧ್ಯಾಲಯಜಲನಿಧಿಜೋಲ್ಲಾಸದಾಯೀಶ ಲೋಲ -
ಪ್ರೇಕ್ಷಾಪ್ತಾತುಲ್ಯಮೂಲ್ಯಾ ಖಲಕುಲದಲನೇ ಶೂಲತುಲ್ಯೋರುಲೀಲಾ ॥
ರಾಜತ್ಸದ್ವೈಜಯೀಂದ್ರಧ್ವಜವಿಜಯಮಣಿಂ ವೈಜಯಂತೀ ಧರಂತೀ
ಮಾಧ್ವತ್ವಾಪ್ತ್ಯೈ ಸುಧೀನಾಂ ವಿಲಸತಿ ತುಲಸೀಹಾರವತ್ಕಂಠವಾರೇ ॥ ೩೦ ॥

ಸಮುದ್ರವನ್ನೇ ಮನೆಯಾಗಿಸಿಕೊಂಡಿರುವ ಪರಮಾತ್ಮನು, ಹಾಗೂ ಸಮುದ್ರದಲ್ಲಿ ಅವಿರ್ಭಾವ ತಾಳಿದ ಲಕ್ಷ್ಮೀದೇವಿಯು, ಇವರಿಬ್ಬರ ಉಲ್ಲಾಸಕರವಾದ ಚಂಚಲವಾದ ನೋಟದಿಂದ ಬಹಳ ಬೆಲೆಯುಳ್ಳ, ಹಾಗೂ ದುಷ್ಟಕೂಟವನ್ನು ಕೊಲ್ಲುವಲ್ಲಿ ನೇಣಿನಂತಿರುವ, ವಿರಾಜಿಸುವ ಶ್ರೀ ವಿಜಯೀಂದ್ರತೀರ್ಥರ ಧ್ವಜದ ವಿಜಯವೆಂಬ ರತ್ನವನ್ನು ಹೊತ್ತಿರುವ, (ವಿಜಯೀಂದ್ರ ವಿಜಯ ವೈಜಯಂತೀ) ಎಂಬ ವೈಜಯಂತೀ ಮಾಲೆಯು ಮಾಧ್ವದೀಕ್ಷೆಗಾಗಿ ತುಲಸೀಮಣಿಯ ಹಾರವಿರುವಂತೆ ಎಲ್ಲ ವಿದ್ವಾಂಸರ ಕೊರಳುಗಳಲ್ಲಿ ಶೋಭಿಸುತ್ತಿದೆ.

ಹೃದ್ಯೋ ವಿದ್ಯಾವಿವೇಕೋ ಜನಕ ಇವ ಮುದಾ ಬೋಧಕೋಽವಧ್ಯವಾಕೋ
ವಿದ್ವಂದ್ವಂಧುಪ್ರಭೂತಾತುಲಕಲಹಹರದ್ದಿವ್ಯಸನ್ನ್ಯಾಯದಾತಾ ॥
ಬಾಭಾತ್ಯಂಭೋಧಿಭಾನುರ್ವಿವಿಧಗಮನಸದ್ವಾಗ್ಧುನೀಸಂಗಮೇನ
ತಚ್ಛಸ್ತಾಗಸ್ತ್ಯಹಸ್ತಸ್ಥಿತವಿತತಯಶಶ್ಚೋಲಿಕೀಲಾಲಲೀಲಃ ॥ ೩೧ ॥

ಸುಂದರವಾದ ವಿದ್ಯಾವಿವೇಕವೆಂಬ ಗ್ರಂಥವು ತಂದೆಯಂತೆ ಆನಂದದಿಂದ ತಿಳಿಹೇಳುತ್ತಿದೆ. ತುಂಡರಿಸಲಾಗದ ನಿರ್ಣಯಾತ್ಮಕ ಮಾತುಗಳುಳ್ಳದ್ದಾಗಿದೆ. ಮತ್ತೆ ವಿದ್ವಾಂಸರೆಂಬ ಬಂಧುಗಳಲ್ಲುಂಟಾದ ದೊಡ್ಡ ಜಗಳವನ್ನು ಪರಿಹರಿಸುವ ಶ್ರೇಷ್ಠ ನ್ಯಾಯನಿರ್ಣಯವನ್ನು ನೀಡುತ್ತಿದೆ. ಪೂರ್ವಾಪರರೂಪದಿಂದ ಅನೇಕವಿಧವಾಗಿ ವಿರುದ್ಧ ದಿಶೆಯಲ್ಲಿ ಸಂಚರಿಸುವ ಸಜ್ಜನರ ವಾಕ್ಯಗಳೆಂಬ ನದಿಗಳ ಸಂಗಮನವಿರುವುದರಿಂದ ಸಮುದ್ರದಂತಿದ್ದರೂ ಅದು, ಆ ಆಚಾರ್ಯರೆಂಬ ಅಗಸ್ತ್ಯಋಷಿಗಳ ಪ್ರಶಸ್ತವಾದ ಕೈಯಲ್ಲಿ ವಿಸ್ತಾರಕೀರ್ತಿಯುಳ್ಳ ಅಪೋಶನ ತೀರ್ಥದಂತೆ ಪುಟ್ಟದಾಗಿ ವಿರಾಜಿಸುತ್ತಿದೆ.

ಸಂಕ್ಷಿಪ್ತಂ ಕ್ಷಿಪ್ತದೋಷಂ ನವವಿವಿಧಪರಿಷ್ಕಾರರಾಜದ್ವಿಚಾರಂ
ನೂತ್ನಂ ಧೀರಾಂತರಾಣಾಂ ರುಚಿರವಿವರಣಂ ಕ್ರೋಡಪತ್ರಾಭಮಸ್ಯ ॥
ಆಜ್ಯದ್ರಾಕ್ಷಾದ್ಯಿರೂಪಾಮಿತವಿವೃತಿಲಸತ್ತತ್ತ್ವಸಂಖ್ಯಾನಟೀಕಾ -
ರೂಪೇ ಸಂಪ್ರೀತಗೋಪೇ ಧರತಿ ಹಿ ಮಧುರೇ ಪಾಯಸೇ ಕೇಸರಾಭಮ್ ॥ ೩೨ ॥

ಶ್ರೀ ಆಚಾರ್ಯರ ರಚಿಸಿದ 'ತತ್ವಸಂಖ್ಯಾನಟೀಕಾವಿವರಣಂ' ಎಂಬ ನಿರ್ಮಲ ಕೃತಿಯ ಕಿರಿದಾಗಿದ್ದರೂ, ಹೊಸಮಾದರಿಯ ಅನೇಕ ವಿಧ ಪರಿಷ್ಕಾರಗಳಿಂದ ಕಂಗೊಳಿಸುವ ವಿಚಾರದಿಂ ಧೀಮಂತರ ಅಂತರಾಳವನ್ನು ಸೆಳೆಯುವ ಸುಂದರ ಕ್ರೋಡಪತ್ರದಂತೆ ಶೋಭಿಸುತ್ತಿದೆ. ಬಾ ಗೋಪಾಲಕೃಷ್ಣನಿಗೆ ಬಹುಪ್ರಿಯವಾದ, ಮಧುರವಾದ ಶ್ರೀಟೀಕಾಚಾರ್ಯರ 'ತತ್ವಸಂಖ್ಯಾನಟೀಕ ಎಂಬ ಪಾಯಸದಲ್ಲಿ ಅನೇಕ ಜ್ಞಾನಿಗಳ ಟಿಪ್ಪಣಿಗಳು ತುಪ್ಪ-ದ್ರಾಕ್ಷಿ-ಗೋಡಂಬಿ ಇತ್ಯಾದಿಗಳಂ ಇದ್ದರೆ, ಶ್ರೀ ಆಚಾರ್ಯರ ಈ ವಿವರಣೆ ಕೇಸರಿಯಂತೆ ಕಂಗೊಳಿಸುತ್ತಿದೆ.

**ಮಾಯಾಪೇಯಂ ನಿಪೀಯ ಶ್ರುತಿವಿಷಹಮಿಹಾಕ್ರುಶ್ಯ ವಿಜ್ಞಾಪಿತಸ್ವ -**
**ಶ್ವಾಕಾರಂ ದ್ರಾವಿತಂ ದ್ರಾಗ್ವಿಜಯಿಹರಿಸುತೈರ್ಮಾಯಿಕುಗ್ರಾಮಸಿಂಹಮ್ ॥**
**ಆಯಾಂತುಂ ಚೋದಿತಂ ಸದ್ವಿಪಿನಮಪಿ ಪುನಸ್ತಾಮ್ರಚೂಡೈಃ ಕುರಾವೈಃ**
**ಮಧ್ಯೇ ಪಾದೈರ್ನಿರುಂಧನ್ ವಿಲಸತಿ ಶರಭೋ(ऽ)ಶೇಷಗೋಭೂಷಣಾಭಃ ॥೩೩ ॥**

ಮಾಯಾವಾದವೆಂಬುವ ಮೋಹಗೊಳಿಸುವ ಅಪೇಯ (ಮದ್ಯ)ವನ್ನು ಕುಡಿದು, ಶ್ರುತಿಗಳಿಂ ಶ್ರೋತ್ರೇಂದ್ರಿಯಕ್ಕೆ ಅಸಹ್ಯವಾಗುವ ಹಾಗೆ ಬೊಗಳುತ್ತಾ, ತನ್ನ ನಾಯಿಯ ಆಕಾರವನ (ಅಪೇಯದೀಕ್ಷಿತನೆಂಬ ಹೆಸರನ್ನು) ತಿಳಿಸಿದ ಪ್ರಾಣಿಯನ್ನು ಕೂಡಲೇ ಶ್ರೀ ವಿಜಯೀಂ ತೀರ್ಥರೇ ಮೊದಲಾದ ನರಹರಿಯ ಪುತ್ರರೆಂಬ ವಿಜಯಿಗಳಾದ ಹರಿಯ (ಸಿಂಹದ) ಮರಿಗಳ ಓಡಿಸಿಬಿಟ್ಟವು. ಆಗ ಮಾಯಾವಾದಿಗಳ ಕುಗ್ರಾಮದಲ್ಲೇ ಇದ್ದು ಗ್ರಾಮಸಿಂಹವೇ ಆಗಿದ್ದ ಪ್ರಾಣಿಯು ಕೆಟ್ಟದಾಗಿ ಕೂಗುವ ನವೀನ ತಾಮ್ರಚೂಡಗಳಿಂದ (ತಾಮ್ರದಂತೆ ಕೆಂಪು ಕೂದಲು ಚಿನ್ನಸ್ವಾಮಿಶಾಸ್ತ್ರಿಯೇ ಮೊದಲಾದವರೆಂಬುವ - ಕೋಳಿಗಳಿಂದ) ಪ್ರಚೋದಿತವಾಗಿ ಮ ಸಜ್ಜನರ ಸಮೂಹವೆಂಬ ಒಳ್ಳೆಯ ವನಕ್ಕೆ ಆಗಮಿಸಲು ಹೊರಟಾಗ ಮಧ್ಯದಲ್ಲೇ ಅದನ ಪಾದಗಳಿಂದ (ಸ್ವಪದಸಂಬಂಧಿವ್ಯಾಖ್ಯಾನಗಳೆಂಬ ಕಾಲುಗಳಿಂದ) ತಡೆಯುವ ಹಾಗೂ ಸುಖಕರವಾ ಸುಖತೀರ್ಥರ ವಾಕ್ಯಗಳಿಗೆ ಭೂಷಣವಾದ ಸಿದ್ಧಾಂತಭೂಷಣ ಗ್ರಂಥವು ಅಖಂಡಭೂಮಂಡಲ ಭೂಷಣವಾದ ಶರಭದಂತೆ ಶರಭವಾಗಿ (ಶರ-ಬಾಣಗಳಂತೆ ಭ-ಕಾಂತಿಯುಳ್ಳದ್ದಾಗಿ) ವಿರಾಜಿಸುತ್ತಿದೆ

**ವಿದ್ಯಾಕ್ಷುತ್ಪೀಡಿತಾನಾಂ ಮಧುರತರಸುಧಾಭೋಜನೇ ತೀರ್ಥಚೋಲಿಃ**
**ಮತ್ತಾನಾಂ ಪಂಡಿತಾನಾಂ ದುರಧಿಗಮತರಸ್ವಾಂತರಾಪಾರವಾರ್ಧಿಃ ॥**
**ಸದ್ಭಾಷಾಭೂಷವೈಶೇಷಿಕಸುನಯಸುಧಾಕೂತಮಸ್ತೀತ್ಯಚಿತ್ರಂ**
**ವಿದ್ಯೈಶ್ವರ್ಯೇ ಹಿ ದೈವೇ ವಿಘಟಿತಘಟನಾ ಚಿತ್ರತಾಂ ಕುತ್ರ ಕುರ್ಯಾತ್ ॥೩೪ ॥**

ವಿದ್ಯೆಯ ಹಸಿವೆಯಿಂದ ಬಳಲಿರುವ ಜನರಿಗೆ ಬಹಳ ಮಧುರವಾದ 'ಶ್ರೀ ಮನ್ನ್ಯಾಯಸುಧಾ ಎಂಬುವ ಅಮೃತದ ಭೋಜನಕ್ಕೆ ಅಪೋಶನತೀರ್ಥದಂತೆ ಚಿಕ್ಕದಾಗಿದ್ದರೂ, ಉನ್ಮತ್ತರಾದ

ಪಂಡಿತರಿಗೆ ಹೊಂದಲು ಅತ್ಯಸಾಧ್ಯವಾದ ತನ್ನ ಆಂತರ್ಯವುಳ್ಳ ಆಪಾರಸಮುದ್ರದಂತೆ 'ಶ್ರೀ ವೈಶೇಷಿಕನಯನ್ಯಾಯಸುಧಾಕೂತಂ' ಎಂಬುವ ಒಳ್ಳೆಯ ಭಾಷೆಯ ಭೂಷಣವುಳ್ಳ ಗ್ರಂಥವು ವಿರಾಜಿಸುತ್ತಿದೆ. ಒಂದೇ ವಸ್ತುವು ಅಪೋಶನತೀರ್ಥದಂತೆಯೂ ಸಮುದ್ರದಂತೆಯೂ ಆಗುವುದು ಆಶ್ಚರ್ಯಕರವಾದರೂ, ಇಲ್ಲಿ ಹಾಗೆ ಆಶ್ಚರ್ಯವೇನೂ ಇಲ್ಲ. ಏಕೆಂದರೇ ಅಲೌಕಿಕವಾದ ವಿದ್ಯೆಯೆಂಬುವ ಐಶ್ವರ್ಯ (ಅಚಿಂತ್ಯಶಕ್ತಿ) ವಿದ್ದಾಗ ಅಘಟಿತವಾದುದರ ಘಟನೆಯಿಂದ ಎಲ್ಲಿ ಆಶ್ಚರ್ಯವುಂಟಾಗುತ್ತದೆ?

**ಸಾಲಂಕಾರಾ ಸುಧೀರಾಮೃತಪತಿಜನಿತಾ ಗದ್ಯಪದ್ಯಾಭಿಧೋದ್ಯ -**
**ದ್ಧೃದ್ಯಾವದ್ಯಾದಿದೂರಾಂಬುಜಸದೃಶಪದಾ ಸುಂದರಾಕಾರಚೇರಾ ||**
**ಶ್ರಿತ್ವಾ ಶ್ರೀಜಾತವೇದಂ ಜಗದಸಮಪತಿಂ ಸ್ವಾಶ್ರಿತೇಷ್ಟಪ್ರದಾತ್ರೀ**
**ವಿಶ್ರಾಂತೋದಂತಕೀರ್ತಿಃ ಶ್ರಯತಿ ಸುವಿವೃತಿರ್ವಿಶ್ರುತಾ ಶ್ರೀಶ್ರುತೀನಾಮ್ || ೩೫ ||**

ಅಲಂಕಾರಗಳಿಂದ ಗುಂಫಿತವಾದ, ಶ್ರೇಷ್ಠ ಜ್ಞಾನಿಗಳಾದ ಶ್ರೀಆಚಾರ್ಯರೆಂಬ ಅಮೃತರಸರಾಜನಾದ ಸಮುದ್ರದಿಂದ ಆವಿರ್ಭಾವವುಳ್ಳ, ಗದ್ಯ ಪದ್ಯವೆಂಬ ಉತ್ಸಾಹಪೂರ್ಣವೂ ಸುಂದರವೂ ನಿರ್ಮಲವೂ ಆದ ಕಮಲದಂತಿರುವ ಪದ (ಪಾದ) ಗಳುಳ್ಳ, ಸುಂದರವಾದ ಆಕಾರವೆಂಬ ವಸ್ತ್ರವುಳ್ಳ, ಜಗದೊಡೆಯನಾದ ವೇದಪ್ರತಿಪಾದ್ಯನಾದ ಶ್ರೀಹರಿಯನ್ನು ಆಶ್ರಯಿಸಿ ತನ್ನನ್ನಾಶ್ರಯಿಸಿದವರಿಗೆ ಅಭೀಷ್ಟವನ್ನು ನೀಡುತ್ತಿರುವ, ವಿಸ್ತಾರವಾದ ಯಶಸ್ಸುಳ್ಳ ಶ್ರೀ ಸೂಕ್ತದ ಸುಂದರ ವಿವರಣೆಯು ಶ್ರೀದೇವಿಯಂತೆ ಶೋಭಿಸುತ್ತಿದೆ.

**ಧೀಶುದ್ಧ್ಯದ್ಭಾಷ್ಯಟೀಕಾವಿವರಣಗಣಸಂದರ್ಶಿತೋದ್ಯದ್ವಿಚಾರಃ**
**ಈಶಾವಾಸ್ಯಾಭಿಧಾನಶ್ರುತಿಶಿಖರಲಸತ್ಪಂಚಮಂತ್ರಪ್ರಪಂಚಃ ||**
**ದುಷ್ಟಾನಾಂ ಮುಷ್ಟಿಬಂಧಃ ದೃಢಹತಿದಮಿಲತ್ಪಂಚಪುಷ್ಟಾಂಗುಲೀತಃ**
**ಶಿಷ್ಟಾನಾಮಿಷ್ಟದಾತಾಽವಿದಘಹತಿದದತ್ಪಂಚಗವ್ಯಾಯತೇಽಯಮ್ || ೩೬ ||**

ಬುದ್ಧಿಯನ್ನು ಶುದ್ಧಿಗೊಳಿಸುವ ಭಾಷ್ಯ, ಟೀಕೆ, ಅನೇಕ ಟಿಪ್ಪಣಿಗಳ ಉದಾರ ವಿಚಾರದಿಂದ ಕೂಡಿರುವ 'ಈಶಾವಾಸ್ಯ' ಎಂಬ ಉಪನಿಷತ್ತಿನಲ್ಲಿ ಶೋಭಿಸುವ ಮೊದಲೈದು ಮಂತ್ರಗಳ ವಿಸ್ತಾರವಾದ ವಿವರಣೆಯು ದುಷ್ಟವಾದಿಗಳಿಗೆ ಬಲವಾಗಿ ಏಟು ನೀಡುವ ಐದು ಬೆರಳುಗಳ ಒಂದಾದ ಮುಷ್ಟಿಬಂಧನದಂತಿದ್ದರೆ, ಶಿಷ್ಟರಾದವರಿಗೆ ಇಷ್ಟಪ್ರದವಾಗಿ ಅಜ್ಞಾನವೆಂಬ ಪಾಪವನ್ನು ಪರಿಹರಿಸುವ ಪಂಚಗವ್ಯದಂತಾಗಿದೆ.

**ಶ್ರೀಮಧ್ವಾರ್ಯಾದಿನಾನಾಬುಧಮಣಿಧಿಷಣಾಪುಷ್ಕರವ್ಯಾಪ್ತರೂಪಂ**
**ಸಂಗೃಹ್ಯಾವೇದಯತ್ತತ್ಕೃತಿಯುಗಲಮಲಂ ಸೂತ್ರಕಕ್ಷ್ಯೋಕ್ತಮಾರ್ಥಮ್ ||**

ವ್ಯಾಪ್ತಾಕಾಶಸ್ಯ ವಿಷ್ಣೋರಣುಹೃದಯಗುಹಾಸ್ಥೋತ್ತಮಾತ್ಮಾಂತರಾತ್ಮಾ -
ಕಾರೌ ಕಮ್ರಾವಿವಾಲಂ ಲಸತಿ ಬುಧಗುಹಾಮಂಡಲೇಽತುಲ್ಯಲೀಲಂ || ೩೭||

ಶ್ರೀ ಮಧ್ವಾಚಾರ್ಯರೇ ಮೊದಲಾದ ಜ್ಞಾನಿವರೇಣ್ಯರ ಬುದ್ಧಿಯೆಂಬ ಆಕಾಶವನ್ನು ವ್ಯಾಪಿಸಿರುವ ಪರಮಾತ್ಮನ ರೂಪವನ್ನು ಸಂಗ್ರಹಿಸಿ ಪರಿಚಯಿಸುವ ಸೂತ್ರಾರ್ಥಸಂಗ್ರಹ ಕಕ್ಷ್ಯಾರ್ಥಸಂಗ್ರಹವೆಂಬ ಎರಡು ನಿರ್ಮಲ ಕೃತಿಗಳು ಆಕಾಶವನ್ನೆಲ್ಲ ವ್ಯಾಪಿಸಿರುವ ವಿಷ್ಣುವಿನ ಸಣ್ಣದಾದ ಹೃದಯ ಗುಹೆಯೊಳಗಿರುವ ಉತ್ತಮವಾದ ಆತ್ಮ ಅಂತರಾತ್ಮವೆಂಬ ಸುಂದರ ರೂಪಗಳಂತೆ ವಿದ್ವಾಂಸರ ಹೃದಯ ಗುಹೆಯ ಮಂಡಲದಲ್ಲಿ ಅಸದೃಶವಾಗಿ ಕ್ರೀಡಿಸುತ್ತಾ ವಿರಾಜಿಸುತ್ತಿವೆ.

ವ್ಯಾಖ್ಯಾ ಪ್ರಾಮಾಣ್ಯವಾದಪ್ರಖರತರಗಿರಾಂ ಧೀರವಾರಾಂತರಾಲ -
ಜ್ವಾಲಾಯಾ ಆಜ್ಯತುಲ್ಯಾ ಖಲಕುಲದಹನೇ ವ್ಯಾಲದಾವಾನಲಾಭಾ ||
ನಾನಾಭಂಗಸ್ಯ ತುಂಗೇ ಬುಧಭುವಿ ಕಮನೀಯಾಂತರಂಗಾಖ್ಯರಂಗೇ
ರಂಗೇಶಪ್ರೀತಿಹೇತೋರ್ಮುನಿಕೃತವಿಲಸತ್ತಾಂಡವಸ್ಯಾಽಽಸ ನಾಂದೀ || ೩೮||

ಪ್ರಾಮಾಣ್ಯವಾದದ ತೀಕ್ಷ್ಣವಾದ ವಚನಗಳಿಗೆ ರಚಿಸಿದ ಆ ಆಚಾರ್ಯರ ವ್ಯಾಖ್ಯಾನವು ಬುದ್ಧಿವಂತರ ಸಮೂಹದ ಅಂತರಾಳದ ಬೆಂಕಿಗೆ ತುಪ್ಪದಂತಿದ್ದರೆ ದುಷ್ಟಕೂಟವನ್ನು ಸುಟ್ಟುಹಾಕುವಲ್ಲಿ ಭಯಂಕರ ಕಾಡ್ಗಿಚ್ಚಿನಂತಿದೆ. ಇಂತಹ ಈ ವ್ಯಾಖ್ಯಾನವು ಪಂಡಿತರ ಭೂಮಿಯಲ್ಲಿ ಸುಂದರ ಅಂತರಂಗವೆಂಬ ಎತ್ತರವಾದ ರಂಗಸ್ಥಳದಲ್ಲಿ ರಂಗನಾಥನ ಪ್ರೀತಿಗಾಗಿ ವ್ಯಾಸಮುನಿಗಳು ನಡೆಸಿದ ತಾಂಡವನೃತ್ಯಕ್ಕೆ (ತರ್ಕತಾಂಡವಕ್ಕೆ) ನಾಂದಿಯಂತೆ ಆಗಿದೆ.

ಲಕ್ಷ್ಮವ್ಯಾಪ್ತಿಪ್ರಮಾಣಪ್ರಭೃತಿತರುಲಸಟ್ಟಿಪ್ಪಣೀಸ್ವರ್ಣಪುಷ್ಪ -
ಪ್ರೋದ್ಯತ್ಸೌಗಂಧ್ಯಬದ್ಧಶ್ವಸನಸುರಭಿವತ್ಸ್ವಾಂತರಾಯಾಂ ವರಾಯಾಮ್ ||
ದೀರ್ಘಾನರ್ಘಪ್ರಮಾಣಾವನಿಗತಜಯರಾಟ್ಪದ್ಧತೌ ವೃದ್ಧಕೀರ್ತ್ಯಾ
ಯಾತ್ರಾರ್ಥಂ ಛಾತ್ರಕಾಣಾಂ ರಥ ಇವ ವಿವೃತಿಸ್ತಸ್ಯ ಧತ್ತೇ ಸಹಾಯಮ್ || ೩೯||

ಲಕ್ಷಣ, ವ್ಯಾಪ್ತಿ, ಪ್ರಮಾಣ ಮೊದಲಾದವುಗಳೆಂಬ ವೃಕ್ಷಗಳಲ್ಲಿ ಕಂಗೊಳಿಸುವ ಟಿಪ್ಪಣಿಗಳ ಸುವರ್ಣಗಳೆಂಬ ಬಂಗಾರದ ಹೂಗಳಿಂದ ಚಿಮ್ಮುವ ಸುವಾಸನೆಯಿಂದ ಕೂಡಿದ ಗಾಳಿ (ಮಧ್ವಶಾಸ್ತ್ರ)ಯಿಂದ ಒಳಗೆಲ್ಲ ಘಮಘಮಿಸುವ, ಶ್ರೇಷ್ಠವಾದ, ಯಶಸ್ಸಿನ ಅಭಿವೃದ್ಧಿಯುಳ್ಳ ಅಮೂಲ್ಯವಾದ ಪ್ರಮಾಣಗಳ ಭೂಮಿಯ ಅರಣ್ಯದಲ್ಲಿರುವ, ಶ್ರೀಜಯತೀರ್ಥರ ಸುದೀರ್ಘವಾದ ಮಾರ್ಗದಲ್ಲಿ(ಪ್ರಮಾಣಪದ್ಧತಿಯಲ್ಲಿ) ಶಿಷ್ಯರು ಅನಾಯಾಸವಾಗಿ ಯಾತ್ರೆಮಾಡಲು ಆ ಆಚಾರ್ಯರು ರಚಿಸಿದ ವಿವರಣೆಯು ರಥದಂತೆ ಅವರಿಗೆ ಸಹಾಯವನ್ನು ಮಾಡುತ್ತಿದೆ.

ಮೀಮಾಂಸಾತರ್ಕಶಾಬ್ದಾಬಿಧಘನರಸಧೃದ್ದಿವ್ಯಧಾರಾಧರೇಣ
ಟೀಕಾವ್ಯಾಖ್ಯಾದಿಸಂದರ್ಶಿತಪಥಗತಿನಾ ತೇನ ವಿಕ್ಷಿಪ್ಯ ದತ್ತಾಃ ॥
ವ್ಯಾಖ್ಯಾ ಲಘ್ವ್ಯೋಽಥ ಗುರ್ವ್ಯೋ ಗುರುವರಜಯರಾಡ್ವ್ಯಾಸರಾಟ್ ಪೂರ್ವವಾಚಾಂ
ವಿದ್ಯಾಕಾಶೇ ಚ ವಿದ್ಯುತ್ತತಿರಿವ ಸುದೃಶಾಂ ಶರ್ಮ ನಿರ್ಮಾಂತಿ ಚಿತ್ರಮ್ ॥ ೪೦ ॥

(ಶ್ರೀ ಜಯತೀರ್ಥಗುರುಗಳ) ಟೀಕೆ, (ಶ್ರೀವ್ಯಾಸರಾಜರೇ ಮೊದಲಾದವರ) ಟಿಪ್ಪಣಿ ಇವೇ ಮೊದಲಾದವುಗಳಿಂದ ತೋರಿಸಲ್ಪಟ್ಟ ಮಾರ್ಗದಲ್ಲಿ ಸಂಚರಿಸುವ, ಮೀಮಾಂಸಾ, ತರ್ಕ, ವ್ಯಾಕರಣಗಳೆಂಬ, ಸಾಂದ್ರವಾದ ನೀರನ್ನು ಹೊತ್ತ ಶ್ರೀ ಆಚಾರ್ಯರೆಂಬ ಮೇಘವು ಗುರುವರ್ಯರಾದ ಶ್ರೀಜಯತೀರ್ಥರು ವ್ಯಾಸರಾಜರು ಮೊದಲಾದ ಪೂರ್ವೀಕರ ವಚನಗಳ ಮೇಲೆ ವಿಕ್ಷಿಪ್ತವಾಗಿ (ಕೆಲವು ವಿಷಯಗಳ ಬಗ್ಗೆ) ರಚಿಸಿದ ಸಣ್ಣದಾದ ಹಾಗೂ ದೊಡ್ಡದಾದ ವಿವರಣೆಗಳು ಒಳ್ಳೆಯ ಬುದ್ಧಿಯುಳ್ಳವರಿಗೆ (ಸೂಕ್ಷ್ಮದರ್ಶಿಗಳಿಗೆ) 'ವಿದ್ಯಾ' ಎಂಬ ಆಕಾಶದಲ್ಲಿ ಮಿಂಚುಗಳಂತೆ ವಿಚಿತ್ರವಾದ ಆನಂದವನ್ನು ಹುಟ್ಟಿಸುತ್ತದೆ.

ಗ್ರಂಥೇಶಃ ಸೂಕ್ತಭೇಶಃ ಶ್ರುತಿಶಿಖರಜಟಃ ಬ್ರಹ್ಮಸೂತ್ರೀ ಸುಧಾಸ್ವ -
ರ್ಗಂಗಾವಾನ್ ವ್ಯಾಸವಾಕ್‌ತ್ರೀಕ್ಷಣಪವನಮತಶ್ವಾಸವಾನ್ ಸ್ವೋಕ್ತಿವಾಸಾಃ ॥
ಟೀಕಾವ್ಯಾಖ್ಯಾದಿಭೂಷಃ ಪರಮದನಹರೋ ಯುಕ್ತ್ಯುಮಾಲಿಂಗಿತಾಂಗಃ
ಮೀಮಾಂಸಾಮಾಂಸಶಾಬ್ದೋ ಹರಿರತಿರುಧಿರೋ ಭಾತಿ ದೀಕ್ಷಾದೃಢಾಸ್ಥಿಃ ॥ ೪೧ ॥

ಶ್ರೀ ಆಚಾರ್ಯರ ಗ್ರಂಥವು ಮಹರುದ್ರದೇವರಂತೆ ಶೋಭಿಸುತ್ತಿದೆ. ಶ್ರೀಸೂಕ್ತವೆಂಬ ಚಂದಿರನುಳ್ಳ ಈ ಗ್ರಂಥರುದ್ರನಿಗೆ ಈಶಾವಾಸ್ಯಾದಿ ವೇದಶಿರಸ್ಸುಗಳೇ ಜಟೆ (ಶಿರಸ್ಸು). ಇವನು ಬ್ರಹ್ಮಸೂತ್ರಗಳೆಂಬ ಬ್ರಹ್ಮಸೂತ್ರ (ಯಜ್ಞೋಪವೀತ) ವುಳ್ಳವನಾಗಿದ್ದಾನೆ. 'ನ್ಯಾಯಸುಧಾ' ಎಂಬುವ ಗಂಗೆಯನ್ನು ಧರಿಸಿದ್ದಾನೆ. ಶ್ರೀ ವ್ಯಾಸರಾಜರ 'ನ್ಯಾಯಾಮೃತ-ಚಂದ್ರಿಕಾ - ತರ್ಕತಾಂಡವ' ಎಂಬುವ ಮೂರು ಕಣ್ಣುಳ್ಳವನಾಗಿದ್ದಾನೆ. ವಾಯುದೇವರ (ಶ್ರೀಮದಾಚಾರ್ಯರ) ಸಿದ್ಧಾಂತವೆಂಬುವ ಶ್ವಾಸವಾಯುವುಳ್ಳವನಾಗಿದ್ದಾನೆ. ಸ್ವತಂತ್ರಗ್ರಂಥಗಳೆಂಬುವ ವಸ್ತ್ರಧರಿಸಿರುವ ಇವನಿಗೆ ಟೀಕಾಟಿಪ್ಪಣಿಗಳ ವ್ಯಾಖ್ಯಾನವೇ ಸರ್ಪಾದಿಭೂಷಣರೂಪವಾಗಿವೆ. ಪರವಾದಿಗಳೆಂಬುವ ಮನ್ಮಥನನ್ನು ನಾಶಗೊಳಿಸುವ ಈ ಗ್ರಂಥರುದ್ರನ ಷಡಂಗಗಳೆಂಬುವ ಎಲ್ಲ ಅಂಗಗಳು ಯುಕ್ತಿಯೆಂಬುವ ಪಾರ್ವತೀ ದೇವಿಯಿಂದ ಆಲಿಂಗಿಸಲ್ಪಟ್ಟಿವೆ. ಈ ರುದ್ರದೇವರಿಗೆ ಮೀಮಾಂಸಾಶಾಸ್ತ್ರವೇ ಮೈತುಂಬಿರುವ ಮಾಂಸ. ವ್ಯಾಕರಣಮೂಲನಾದ ಇವನ ದೇಹದಲ್ಲಿ ಹರಿಭಕ್ತಿಯೇ ಎಲ್ಲೆಡೆ ಹರಿಯುತ್ತಿರುವ ರಕ್ತ. ಶ್ರೀಮಧ್ವಸಿದ್ಧಾಂತದೀಕ್ಷೆಯೇ ಸರ್ವಮೂಲವಾದ ದೃಢವಾದ ಮೂಳೆಗಳಂತೆ ಇದೆ. (ಇದು ಶ್ರೀ ಆಚಾರ್ಯರ ಸಮಗ್ರ ಗ್ರಂಥಗಳ ಏಕತ್ರ ಸಮಗ್ರವಾದ ಚಿತ್ರಣ.)

ವಾದಪ್ರೌಢಪ್ರಬಂಧಾನ್ ಧೃತವಿವಿಧಸುಧಾಸ್ವಾದುಚಾರೂರುಚರ್ಚಾನ್
ಪ್ರಾಚೀನಾಚಾರ್ಯವಾಚಾಮನುಗಮನವಿಧೌ ಬದ್ಧಶುದ್ಧಾಗ್ರ್ಯಸಂಧಾನ್ ॥
ದುರ್ವಾಗ್ಗರ್ವೌಘನಿರ್ವಾಪಣಪಣಸುಚಣಾನ್ ವರ್ಣಯೇ ಕಿನ್ನು ಮಂದಃ
ಮಾಧ್ವಾನಾಂ ಯದ್ವಿನಾ ನೋಽವನಮವನಿತಲೇ ಮಾನನಂ ಚಾಽಧುನಾ ಸ್ಯಾತ್ ॥೮೨॥

ಆ ಆಚಾರ್ಯರ ರಚನೆಗಳನ್ನು ನಾನೆಷ್ಟು ವರ್ಣಿಸೇನು ? ಅವರ ಪ್ರೌಢವಾದ ವಾದಗ್ರಂಥಗಳು ನ್ಯಾಯಸುಧೆಯಿಂದ ರುಚಿಕರವಾದ ಹಾಗೂ ಸುಂದರವಾದ ಅನೇಕ ವಿಧ ಚರ್ಚೆಗಳನ್ನು ಒಳಗೊಂಡಿವೆ. ಪ್ರಾಚೀನ ಆಚಾರ್ಯರ ಮಾತುಗಳಲ್ಲಿ ಪರಸ್ಪರ ಸಮನ್ವಯ ಮಾಡುವುದೇ ಇವುಗಳ ಶುದ್ಧ ಹಾಗೂ ಪ್ರಾಥಮಿಕ ಉದ್ದೇಶ. ಅಲ್ಲದೇ ದುರ್ವಾದಿಗಳ ಗರ್ವವನ್ನು ಭಂಗ ಮಾಡುವ ಪಣ ತೊಟ್ಟಿದೆ. ಇಂತಹ ಈ ಗ್ರಂಥಗಳಿಲ್ಲದೇ ಮಾಧ್ವರಿಗಿಂದು ಭೂಮಂಡಲದಲ್ಲಿ ರಕ್ಷೆಯಿಲ್ಲ ಹಾಗೂ ಗೌರವವಂತೂ ಸಾಧ್ಯವೇ ಇಲ್ಲ.

ಚಂಡಕ್ರೀಡಃ ಸ ಶೌಂಡಃ ಪರವಚನರಿಪ್ರೋಃ ಪೀಡನೇ ಪಂಡಿತೇಶಃ
ಶ್ರೀಮನ್ಮಧ್ವಾಗಮಾಬ್ಧೇರ್ವಿಧುರಿವ ಬಹುಧಾ ವರ್ಧಕೋಽವಧ್ಯವಾಕಃ ॥
ಧನ್ಯೋ ಮಾನ್ಯೋಽಸ್ತಿ ಕನ್ಯಾಂ ಭಗವತಿ ಕವಿತಾಮರ್ಪಯನ್ ತರ್ಪಿತೇಶಃ
ಯಾಽಽದ್ಯಾಧ್ಯಾಯಾಂತ್ಯಪಾದೋದಿತಗತಿಯುತವಾಗ್ಜಾತಿವೃತ್ತಿಂ ವಿಧತ್ತೇ ॥೮೩॥

ಪಂಡಿತರಾಜರಾದ ಆ ಆಚಾರ್ಯರು ಹೀಗೆ ವಾದಗ್ರಂಥಗಳಿಂದ ಪ್ರಚಂಡವಾಗಿ ಕ್ರೀಡಿಸುತ್ತ ಪರವಾದಿಗಳ ಮಾತುಗಳನ್ನು ಚೆನ್ನಾಗಿ ಪೀಡಿಸುತ್ತಿದ್ದಾರೆ. ಹಾಗೆಯೇ ಟಿಪ್ಪಣ್ಯಾದಿಗಳಿಂದ ಶ್ರೀಮನ್ಮಧ್ವಸಿದ್ಧಾಂತವೆಂಬ ಸಮುದ್ರಕ್ಕೆ ಚಂದ್ರನಂತೆ ಬಹುಮುಖವಾಗಿ ಅಭಿವೃದ್ಧಿಯನ್ನು ನೀಡಿದ್ದಾರೆ. ಇಂತಹ ಆ ಆಚಾರ್ಯರು ತಮ್ಮ 'ಕವಿತಾ' ಎಂಬ ಕನ್ಯೆಯನ್ನು ಭಗವಂತನಿಗಾಗಿಯೇ ಅರ್ಪಿಸಿ ಪರಮಾತ್ಮನನ್ನು ತೃಪ್ತಿಪಡಿಸಿ ಧನ್ಯರಾಗಿದ್ದಾರೆ ಹಾಗೂ ಮಾನ್ಯರಾಗಿದ್ದಾರೆ. ಆ ಕವಿತೆಯು ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ಕೊನೆಯ ಪಾದದಲ್ಲಿ ಹೇಳಿದ ನಿಯಮವುಳ್ಳ ಶಬ್ದಗಳ ವೃತ್ತಿಯನ್ನು ಅನುಸರಿಸುತ್ತಿದೆ. ( अन्यत्रैव ಪ್ರಸಿದ್ಧ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯಮಾಡುವಂತೆ ಇತರ ಕವಿಗಳಿಂದ अन्यत्रैव ಪ್ರಸಿದ್ಧವಾಗಿದ್ದ ಕವಿತೆಯನ್ನು ಭಗವಂತನಲ್ಲಿ ಸಮನ್ವಯ ಮಾಡಿದ್ದಾರೆಂದು ಭಾವ).

ಭವ್ಯಂ ಸತ್ಸ್ವೇವ್ಯದೀವ್ಯದ್ವಿಜಯನಿಜಗುರೋರ್ವೈಭವಂ ವರ್ಣಯತ್ತ -
ದ್ದಿವ್ಯಂ ಕಾವ್ಯಂ ಚ ನವ್ಯಂ ಸ್ವಪಿತುರಪಿ ಪಿತ್ರೈವಾಸ್ತಿ ರಮ್ಯೇಷು ರಮ್ಯಮ್ ॥
ನೂತ್ನಸ್ವಾನಂದತೀರ್ಥಪ್ರಿಯತಮಗುರುರಾಜಾತ್ಮಜಾತಸ್ಯ ಯಸ್ಮಾ -
ಜ್ಜಾತಾಽಭಾಗ್ಯೈರಲಭ್ಯಾ ಬುಧಭುವಿ ವಿತತಾ ನೂತ್ನನಾರಾಯಣಾಖ್ಯಾ ॥ ೮೪ ॥

ಸಜ್ಜನರೆಲ್ಲ ಸೇವಿಸುವ ದಿವ್ಯವಿಜಯಿಗಳಾದ ತಮ್ಮ ಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರ ಭವ್ಯವಾದ ವೈಭವವನ್ನು ವರ್ಣಿಸುವ ದಿವ್ಯವಾದ ಆ ಆಚಾರ್ಯರ ನವೀನ ಕಾವ್ಯವು ಸುಂದರದೊಳಗೆ ಅತಿ ಸುಂದರವಾಗಿದೆ. ಹಾಗೂ ತನ್ನ ತಂದೆಯಾದ (ಅಂದರೆ ಉತ್ಪತ್ತಿನೀಡಿದ) ಆ ಆಚಾರ್ಯರಿಗೆ ತಂದೆಯಂತೇ ಆಗಿದೆ. ಯಾಕೆಂದರೆ - ಅಭಿನವ ಆನಂದತೀರ್ಥರೆನಿಸಿದ ಶ್ರೀ ಸತ್ಯಧ್ಯಾನತೀರ್ಥರಿಗೆ ಅತಿಪ್ರಿಯರಾದ, ಶ್ರೀಸಾತ್ವಿಕಗುರುರಾಜಾಚಾರ್ಯರ ಪುತ್ರರಾದ ಆ ಆಚಾರ್ಯರಿಗೆ ದುರ್ಭಾಗ್ಯರಿಂದ ಅಲಭ್ಯವಾದ ಪಂಡಿತ ಪ್ರಪಂಚದಲ್ಲಿ ವಿಖ್ಯಾತವಾದ "ಅಭಿನವ ನಾರಾಯಣ ಪಂಡಿತಾಚಾರ್ಯ" ರೆಂಬ ಹೆಸರನ್ನು ಆ ಕೃತಿಯು ತಂದಿದೆ.

**ಮಂದಾನಂದಾಯ ಮಂದೇತರನಿಜಗುರುರಾಡ್ವೈಭವಂ ಭವ್ಯಭಾವಂ**
**ಸಂಕ್ಷಿಪ್ಯಾವೇದಯಂತೀ ಕೃತಿರಪಿ ಮಿತವಾಗ್ಬದ್ಧ ಹೃದ್ಯೋರುಪದ್ಯೈಃ ॥**
**ಅದ್ಧಾ ದತ್ತಾಂ ವಿಧತ್ತೇ ನಿಜವರಜನುಷಾ ನೂತ್ನನಾರಾಯಣಾಖ್ಯಾಂ**
**ವಿಖ್ಯಾತಾಮರ್ಥಪೂರ್ಣಾಮಣುತನುರಪಿ ಯಾಽಸ್ತ್ಯರ್ಥ ಸಾಮರ್ಥ್ಯಪೃಥ್ವೀ ॥೪೫॥**

ಅಲ್ಪ ಸಾಮರ್ಥ್ಯವುಳ್ಳವರಿಗೆ ಸಾವಿರ ಶ್ಲೋಕದ ಗುರುವೈಭವಮಹಾಕಾವ್ಯವನ್ನು ಪಠಿಸಲು ಸಾಧ್ಯವಿಲ್ಲವಾದ್ದರಿಂದ ಅವರಿಗೆ ಆನಂದ ನೀಡಲು ಭವ್ಯವಾದ ಅಭಿಪ್ರಾಯಗಳಿಂದ ತುಂಬಿದ ತಮ್ಮಗುರುವರ್ಯರಾದ ಶ್ರೀ ಸತ್ಯಧ್ಯಾನತೀರ್ಥರ ಅಮಂದವಾದ ವೈಭವವನ್ನು ಚಿಕ್ಕ ವಾಕ್ಯಗಳುಳ್ಳ ಸುಂದರ ಹಾಗು ಶ್ರೇಷ್ಠವಾದ ಶ್ಲೋಕಗಳಿಂದ ಸಂಕ್ಷೇಪವಾಗಿ ತಿಳಿಸುವ ಆ ಆಚಾರ್ಯರ 'ಅಣುಗುರುವೈಭವ' ಎಂಬ ಕೃತಿಯು ತನ್ನ ಅಣ್ಣನಾದ 'ಗುರುವೈಭವ ಮಹಾಕಾವ್ಯ' ವು ಆ ಆಚಾರ್ಯರಿಗೆ ನೀಡಿದ 'ಅಭಿನವ ನಾರಾಯಣಪಂಡಿತಾಚಾರ್ಯ' ಎಂಬ ಹೆಸರನ್ನು ವಿಖ್ಯಾತವಾಗುವಂತೆ ಹಾಗೂ ಅನ್ವರ್ಥವಾಗುವಂತೆ ಮಾಡುತ್ತಿದೆ. ಇಂಥಾ ಆ ಕೃತಿಯು ನೋಡಲು ಚಿಕ್ಕದಾಗಿದ್ದರೂ ಅರ್ಥದ ಸಾಮರ್ಥ್ಯದಿಂದ ಬಹಳ ವಿಸ್ತಾರವಾಗಿದೆ. (ನಾರಾಯಣಪಂಡಿತಾಚಾರ್ಯರು ಶ್ರೀಮದಾನಂದತೀರ್ಥರನ್ನು 'ಸುಮಧ್ವವಿಜಯ' 'ಅಣುಮಧ್ವವಿಜಯ' ಎಂಬ ಎರಡು ಕೃತಿಗಳಿಂದ ವರ್ಣಿಸಿದಂತೆ ಪೂಜ್ಯ ಆಚಾರ್ಯರೂ ಸಹ ಅಭಿನವ ಆನಂದತೀರ್ಥರೆನಿಸಿದ ತಮ್ಮಗುರುಗಳನ್ನು 'ಗುರುವೈಭವ' 'ಅಣುಗುರುವೈಭವ' ಎಂಬ ಎರಡು ಕೃತಿಗಳಿಂದ ವರ್ಣಿಸಿರುವುದರಿಂದ ಆಚಾರ್ಯರಿಗೆ 'ಅಭಿನವ ನಾರಾಯಣಪಂಡಿತಾಚಾರ್ಯ' ರೆಂಬ ಹೆಸರು ಅರ್ಥಪೂರ್ಣವೆಂದು ಭಾವವು.

**ತೀರ್ಥಕ್ಷೇತ್ರೇಶ್ವರಾಣಾಂ ಸುವಿತತಯಶಸಾಂ ದಿವ್ಯಮಾಹಾತ್ಮ್ಯಜಾತಂ**
**ನೈಕೈಶ್ಶ್ಲೋಕೈಶ್ಚ ಲೋಕೇಶ್ವರಸುಖಕರಸ್ಸೈರ್ವರ್ಣಯಚ್ಚಾರುವರ್ಣೈಃ ॥**
**ನೂತ್ನಂ ತತ್ಕಾವ್ಯರತ್ನಂ ಬುಧಹೃದಯಗತಂ ವಾದಿರಾಜಾರ್ಯಕಾವ್ಯಾ -**
**ದಿತ್ಯಚ್ಛಾಯೇತಿ ತರ್ಕಂ ದೃಢಯತಿ ಖಲು ತತ್ಪದ್ಯವಿದ್ಯಾವಿಲಾಸೇ ॥ ೪೬ ॥**

ವಿಸ್ತಾರವಾದ ಒಳ್ಳೆಯ ಯಶಸ್ಸುಳ್ಳ ತೀರ್ಥಕ್ಷೇತ್ರಗಳಿಗಧಿಪತಿಗಳಾದ ದೇವತೆಗಳ ದಿವ್ಯವಾದ ಮಾಹಾತ್ಮಗಳನ್ನು, ಜಗತ್ ಸ್ವಾಮಿಯಾದ ಶ್ರೀಹರಿಗೆ ಸಂತೋಷಕರವಾದ ಹಾಗೂ ಸುಂದರವರ್ಣಗಳುಳ್ಳ ಅನೇಕ ಶ್ಲೋಕಗಳಿಂದ ವರ್ಣಿಸುವ ಆ ಆಚಾರ್ಯರ ನೂತನವಾದ 'ತೀರ್ಥಕ್ಷೇತ್ರವಿಲಾಸ' ಎಂಬ ಕಾವ್ಯ ರತ್ನವು ಆ ಆಚಾರ್ಯರ ಪದ್ಯವಿದ್ಯೆಯಲ್ಲಿ (ಕವಿತೆಯಲ್ಲಿ) ಶ್ರೀ ವಾದಿರಾಜಗುರುವರ್ಯರ ಕಾವ್ಯಗಳೆಂಬ ಸೂರ್ಯನ ಛಾಯೆಯಿರುವುದೆಂಬ ವಿದ್ವಾಂಸರ ಊಹೆಯನ್ನು ನಿಜವಾಗಿಯೂ ದೃಢಪಡಿಸುತ್ತದೆ. (ಶ್ಲೋಕದ ಸೌಂದರ್ಯದಿಂದ ಶ್ರೀ ವಾದಿರಾಜತೀರ್ಥರ ಕಾವ್ಯದ ಅನುಕರಣೆಯಿದೆಯೆಂಬ ಊಹೆಗೆ ಶ್ರೀವಾದಿರಾಜತೀರ್ಥರು 'ತೀರ್ಥಪ್ರಬಂಧ' ರಚಿಸಿದಂತೆ ಆಚಾರ್ಯರು 'ತೀರ್ಥಕ್ಷೇತ್ರವಿಲಾಸ' ವನ್ನು ರಚಿಸುವುದರಿಂದ ಹೆಚ್ಚು ಪುಷ್ಟಿ ಬಂದಂತಾಯಿತು ಎಂದು ಭಾವವು).

**ಶೃಂಗಾರಾನಂಗತಾತಸ್ಸರಸಮಧುರವಾಗ್ದ್ವಾರಕಾಂತರ್ನಿವಾಸಃ**
**ಹೃದ್ಯಾಲಂಕಾರವಾಸಾಸ್ತದಮಲಧಿಷಣಾಗೋಪಯೋಷಿದ್ವಿಲಾಸಃ ॥**
**ಭಕ್ತಿಶ್ರೀಪ್ರೇಮಪೂರ್ಣಃ ಮುದಿತಬುಧಗಣೋ ವಿಪ್ರಸಂದೇಶಕೃಷ್ಣ**
**ಚಕ್ರೇಽಲಂ ಮೇಘದೂತಂ ಖಲು ನಿಹತಮುಖಂ ಪೌಂಡ್ರಕಂ ವಾಸುದೇವಂ ॥೪೭॥**

ಆ ಆಚಾರ್ಯರ ರಚನೆಯಾದ ವಿಪ್ರಸಂದೇಶವೆಂಬ ಖಂಡಕಾವ್ಯವು ಶ್ರೀ ಕೃಷ್ಣ ಪರಮಾತ್ಮನಂತಿದೆ. ಶ್ರೀ ಕೃಷ್ಣನು ಶೃಂಗಾರವೆಂಬ ಮನ್ಮಥನಿಗೆ (ಪ್ರದ್ಯುಮ್ನನಿಗೆ) ತಂದೆಯಾಗಿದ್ದಾನೆ. ಸರಸಮಧುರವಾದ 'ವಾಕ್' (ಮಾತುಗಳೇ) ಅವಾಸಸ್ಥಳವಾದ ದ್ವಾರಕಾ. ಸುಂದರ ಅಲಂಕಾರಗಳೇ ಇವನಿಗೆ ವಸ್ತ್ರಗಳಾಗಿವೆ. ಆ ಆಚಾರ್ಯರ ನಿರ್ಮಲ ಬುದ್ಧಿಯೆಂಬ ಗೋಪಿಕಾಸ್ತ್ರೀಯಲ್ಲಿ ಕ್ರೀಡಿಸುವ ಶ್ರೀ ಕೃಷ್ಣನು ಭಕ್ತಿಯೆಂಬ ಲಕ್ಷ್ಮೀದೇವಿಯಲ್ಲಿ ಪರಿಪೂರ್ಣ ಪ್ರೀತಿಯುಳ್ಳವನಾಗಿದ್ದಾನೆ. ತನ್ನ ವಿಲಾಸಗಳಿಂದ ಭೂದೇವತೆಗಳೆಂಬ ದೇವತೆಗಳ ವೃಂದಕ್ಕೆ ಆನಂದ ನೀಡುವ ಈ ವಿಪ್ರಸಂದೇಶವೆಂಬ ಕೃಷ್ಣಪರಮಾತ್ಮನು ತನ್ನ ವೇಷದಲ್ಲಿದ್ದ 'ಮೇಘದೂತ' ವೆಂಬ ಕೃತಿಯನ್ನು ಮುಖಭಂಗವುಳ್ಳ ಪೌಂಡ್ರಕ ವಾಸುದೇವನನ್ನಾಗಿ ಮಾಡಿದನು.

**ಗೂಢತ್ವಪ್ರಾಪ್ತಶಂಕಾಗಣಿತಮಣಿಲಸತ್ಸ್ವಾಂತರಂ ಕ್ಷಾರವಾರಂ**
**ಪಾರಾವಾರಂ ಚ ತೀರಾವಧಿಮಕೃತಮಿತಂ ಕುಂಭಭೂರಿತ್ಯಚಿತ್ರಮ್ ॥**
**ತಚ್ಚಿತ್ರಂ ಬಾಲಕಾನಾಮಣುಹೃದಿ ಕವನವ್ಯಾಪ್ತಸದ್ವಿಷ್ಣುಪಾದಂ**
**ನೈಕಾಲಂಕಾರತಾರಂ ನಿರವಧಿಕಮಸೌ ನ್ಯಕ್ಷಿಪತ್ ಕ್ಷಿಪ್ರಮಿತ್ಥಮ್ ॥ ೪೮ ॥**

ನಿಗೂಢವಾಗಿರುವುದರಿಂದ 'ಇದೆಯೋ? ಇಲ್ಲವೋ'? ಎಂಬ ಸಂಶಯಾಸ್ಪದವಾದ ಅನೇಕ ಮಣಿಗಳನ್ನು ಒಳಗೆ ಹೊಂದಿರುವ, ಕ್ಷಾರ (ಉಪ್ಪು) ವಾದ ನೀರುಳ್ಳ, ತೀರದವರೆಗೆ

ಅವಧಿಯುಳ್ಳ ಸಮುದ್ರವನ್ನು ಕುಂಭ ಸಂಭವರಾದ ಅಗಸ್ತ್ಯರು ಅತ್ಯಲ್ಪವನ್ನಾಗಿಸಿದರೆಂಬುದು ಆಶ್ಚರ್ಯವೇನೂ ಅಲ್ಲ, ಆದರೆ ಅನೇಕ ಅಲಂಕಾರಗಳೆಂಬ ನಕ್ಷತ್ರಗಳುಳ್ಳ, ಅವಧಿಯೇ ಇಲ್ಲದ, ವ್ಯಾಪ್ತವಾದ ಸಾಹಿತ್ಯವೆಂಬ ವಿಷ್ಣುಪಾದವನ್ನು (ವಿಷ್ಣು ವೈಷ್ಣವವರ್ಣನ ಪರವಾದ ಪದಗಳೆಂಬ ಆಕಾಶವನ್ನು) ಆ ಆಚಾರ್ಯರು ಬಾಲಕರ ಚಿಕ್ಕದಾದ ಹೃದಯದಲ್ಲಿ ಕ್ಷಿಪ್ರವಾಗಿ ಇಡುತ್ತಿದ್ದುದು ಬಹಳ ಆಶ್ಚರ್ಯಕರವಾದದ್ದು ಆಗಿದೆ.

ನಾನಾರೂಪಸ್ಯ ವಿಷ್ಣೋರಗಣಿತಮಹಿಮಾವರ್ಣನಾಸಕ್ತವರ್ಣಂ
ನೂತ್ನಂ ನಾಮ್ನಾ ಸಹಸ್ರಂ ನವರಸಮಧುರಂ ಸುಂದರೋದಾರಕಾವ್ಯಮ್ ॥
ಭಕ್ತ್ಯಂಭೋಜಾತರಾಜದ್ದಶಮದಲಮಿವಾಭಾತಿ ವೈರಾಗ್ಯಭಾಜಾಂ
ಪ್ರಾಸಾಲಂಕಾರರಾಸ್ಯೈ ರಸಿಕಕವಿಹೃದಾಂ ಷಷ್ಠಪುಷ್ಪೇಷ್ವಿಷುಃ ಸ್ಯಾತ್ ॥ ೪೯ ॥

ನಾನಾ ರೂಪನಾದ ವಿಷ್ಣುವಿನ ಅಗಣಿತಮಹಿಮೆಯನ್ನು ವರ್ಣನೆ ಮಾಡುವುದರಲ್ಲಿ ನಿರತವಾದ ವರ್ಣಗಳುಳ್ಳ, ನವರಸಗಳಿಂದ ಮಧುರವಾದ, 'ವಿಷ್ಣುಸಹಸ್ರವೆಂಬ' ಹೊಸದಾದ ಸುಂದರವಾದ ಶ್ರೇಷ್ಠ ಕಾವ್ಯವು ವೈರಾಗ್ಯಶಾಲಿಗಳಾದವರಿಗೆ ಭಕ್ತಿಯೆಂಬ ಕಮಲದಲ್ಲಿ ವಿರಾಜಿಸುವ ಹತ್ತನೇ ದಳದಂತೆ ತೋರುತ್ತಿದ್ದರೆ, ರಸಿಕರಾದ ಕವಿಗಳ ಹೃದಯಕ್ಕೆ ಪ್ರಾಸಗಳು ಅಲಂಕಾರಗಳು ಹಾಗೂ ರಸಗಳು ಇವುಗಳ ವಿಲಾಸದಿಂದ ಮನ್ಮಥನ ಆರನೇ ಹೂಬಾಣದಂತೆ ಆಗಿದೆ.

ಲಕ್ಷ್ಮೀಶಂ ವೇಂಕಟೇಶಂ ಕುಲಪತಿಮತುಲಂ ಪ್ರಾರ್ಥಯಂತೀ ಕೃಪಾರ್ಥಂ
ಶುದ್ಧೈಃ ಪದ್ಯೈರನೇಕೈರ್ವರನಿಗಮಶಿರೋವೇದ್ಯಹೃದ್ಯಾರ್ಥಬದ್ಧೈಃ ॥
ಕಾರುಣ್ಯಾಖ್ಯಾನನಾಮ್ನೀ ಕೃತಿರಜಿತಕೃಪಾಂ ನೇತ್ರಜಾಂ ಕಾರಯಂತೀ
ನೂನಂ ನೇತ್ರಾವತೀಂ ತಾಂ ಶುಭದಹರಿದಯಾವಿಷ್ಣುಪಾದೀಂ ವಿಧತ್ತೇ ॥ ೫೦ ॥

ಕುಲದೇವತೆಯಾದ ಅಸದೃಶನಾದ ಲಕ್ಷ್ಮೀಪತಿಯಾದ ವೆಂಕಟೇಶದೇವರನ್ನು ಕಾರುಣ್ಯ ನೀಡಬೇಕೆಂದು ಶ್ರೇಷ್ಠ ಉಪನಿಷತ್ತುಗಳಿಂದ ತಿಳಿದುಬರುವ ಸುಂದರ ಅರ್ಥಗಳಿಂದ ಗರ್ಭಿತವಾದ ಶುದ್ಧವಾದ ಅನೇಕ ಪದ್ಯಗಳಿಂದ ಭಗವಂತನ ಕಾರುಣ್ಯಪೂರ್ಣ ನೋಟವನ್ನು ಪ್ರಾರ್ಥಿಸುವ 'ಕಾರುಣ್ಯಾಖ್ಯಾನ' ವೆಂಬ ಶ್ರೀ ಆಚಾರ್ಯರ ಕೃತಿಯು ಪರಮಾತ್ಮನ ಕರುಣೆಯನ್ನು ಕಣ್ಣುಗಳಿಂದ ಹುಟ್ಟುವಂತೆ ಮಾಡಿಸುತ್ತಿದೆ. ಇದರಿಂದ ಶುಭಪ್ರದವಾದ ಶ್ರೀಹರಿದಯೆಯೆಂಬ 'ವಿಷ್ಣುಪಾದೀ' ಎನಿಸಿದ ಗಂಗೆಯು 'ನೇತ್ರಾವತೀ' ಎಂದಾದಳು.

ವಿಷ್ಣೋರ್ಲೀಲಾಂ ಸ್ತುವಂತೀ ಸುಮಧುರಲಹರೀನಾಮಧೇಯಂ ಧರಂತೀ
ಧೀರಾಂತರ್ಯಂ ಹರಂತೀ ಕೃತಿರಪರಕೃತೀರ್ಲೀಲಯಾಽಲಂ ಜಯಂತೀ ॥
ಅದ್ಧಾ ಶ್ರದ್ಧಾಧನಾನಾಂ ಪಠನರತರಸಜ್ಞಾಧರತ್ಸದ್ವರಾಣಾಂ
ಭಕ್ತ್ಯಬ್ಧಿಂ ಕೌಮುದೀವತ್ಕಲಯತಿ ಹೃದಯೇ ನಿತ್ಯಮುದ್ರೇಕಯುಕ್ತಮ್ ॥ ೫೧ ॥

ಶ್ರೀ ವಿಷ್ಣುವಿನ ಲೀಲೆಯನ್ನು ಸ್ತುತಿಸುವ, ಸುಮಧುರವಾದ ಲಹರೀ ಎಂಬ ಹೆಸರನ್ನು ಧರಿಸಿರುವ, ಧೀರ ಜನರ ಹೃದಯವನ್ನು ಸೆಳೆದುಕೊಳ್ಳುವ, ಪರಮತೀಯರ 'ಲಹರೀ' ಕೃತಿಗಳನ್ನು ಅನಾಯಾಸವಾಗಿ ಚೆನ್ನಾಗಿ ಗೆಲ್ಲುವ ಆ ಆಚಾರ್ಯರ 'ವಿಷ್ಣುಲಹರೀ' ಎಂಬ ಕೃತಿಯು ಶ್ರದ್ಧೆಯೆಂಬ ಧನವುಳ್ಳ, ಪಠನ ಪರಾಯಣದಲ್ಲಿ ನಿರತವಾದ ನಾಲಿಗೆಯುಳ್ಳ ಸಜ್ಜನವರ್ಯರ ಹೃದಯದಲ್ಲಿ ಭಕ್ತಿಯೆಂಬ ಕಡಲನ್ನು ಬೆಳದಿಂಗಳಿನಂತೆ ನಿತ್ಯವೂ ಉಕ್ಕೇರುವಂತೆ ಮಾಡುತ್ತಿದೆ.

**ಪ್ರಾಸಶ್ವಾಸಾಶನೇತೇ ಶ್ರುತಿಮಣಿಲಸಿತೇ ದಿವ್ಯಹಸ್ತಾವಲಂಬ -**
**ಸ್ತೋತ್ರಾನಂತೇ ಹೃದಂತೋ ವಿಲಸತಿ ವಿಮಲೇ ಭಕ್ತ್ಯಕೂಪಾರಮಧ್ಯೇ ॥**
**ನಾಯಾತಶ್ಚೇತ್ ರಮೇಶೋ ಯದಿ ಭವತಿ ತದಾ ಶೇಷಶಾಯಿತ್ವಲಿಂಗಂ**
**ನೂನಂ ವಿಷ್ಣುತ್ವಸಿದ್ಧೈ ವ್ಯಭಿಚರಿತಮುತಾಸಿದ್ಧಿಬದ್ಧಂ ಭವೇದ್ಧಿ ॥ ೫೨ ॥**

ಹೃದಯದೊಳಗೆ ನಿರ್ಮಲವಾದ ಭಕ್ತಿಯೆಂಬ ಸಮುದ್ರದ ಮಧ್ಯದಲ್ಲಿ ಪ್ರಾಸವೆಂಬ ಶ್ವಾಸವನ್ನೆ ಆಹಾರವಾಗಿ ಹೊಂದಿದ ವೇದಗಳೆಂಬ ಮಣಿಗಳಿಂದ (ಹೆದೆಯಲ್ಲಿ) ಶೋಭಿಸುವ ದಿವ್ಯಹಸ್ತಾವಲಂಬಿ ಸ್ತೋತ್ರಗಳೆಂಬ ಶೇಷನು ವಿರಾಜಮಾನನಾಗಿದ್ದಾಗ ಅಲ್ಲಿಗೆ ರಮಾವಲ್ಲಭನಾದ ಶ್ರೀಹರಿಯು ಆಗಮಿಸಲಿಲ್ಲವೆಂದರೇ ಆಗ ವಿಷ್ಣುತ್ವ ನಿರ್ಣಾಯಕವಾದ ಶೇಷಶಾಯಿತ್ವವೆಂಬ ಹೇತುವು ವ್ಯಭಿಚಾರ ದೋಷವುಳ್ಳದ್ದಾಗಿ ಅಥವಾ ಅಸಿದ್ಧಿ ದೋಷಗ್ರಸ್ತವುಳ್ಳದ್ದಾಗಿ ಆಗುತ್ತದೆ. (ಆದ್ದರಿಂದ ಈ ದೋಷ ಬರಕೂಡದೆಂದು ಶ್ರೀ ಹರಿಯೇ ಹೃದಯಕ್ಕೆ ಆಗಮಿಸುತ್ತಾನೆಂದು ಭಾವವು).

**ಕಲ್ಯಾಣಂ ಪಾಠಕಾನಾಂ ಪಠದಮಲಹೃದಾಂ ವೇಂಕಟೇಶಪ್ರಸಾದಾತ್**
**ಕುರ್ವಾಣಾ ವೇಂಕಟೇಶಪ್ರಭುವರಚರಿತಂ ಹೃದ್ಯಪದ್ಯೈರ್ಬ್ರುವಾಣಾ ॥**
**ನೂತ್ನಾ ತೇನ ಪ್ರಣೀತಾ ಸ್ತುತಿರಪಿ ಮಿತವಾಗ್ಭೂಷಿತಾಽಭೂತಪೂರ್ವಾ**
**ಸ್ವಾಂತಃ ಪೃಥ್ವರ್ಥಪೂರ್ಣಾ ಭಜತಿ ಜಗತಿ ಸಾ ಬಾಲಕೃಷ್ಣಸ್ಯಕೀರ್ತಿಮ್ ॥ ೫೩ ॥**

ನಿರ್ಮಲ ಹೃದಯದಿಂದ ಪಠಿಸುವರಿಗೆ ಹಾಗೂ ಪಠನೆ ಮಾಡಿಸುವವರಿಗೆ ಶ್ರೀ ವೆಂಕಟೇಶ ದೇವರ ಅನುಗ್ರಹದಿಂದ ಕಲ್ಯಾಣವನ್ನುಂಟುಮಾಡುವ, ಸುಂದರ ಶ್ಲೋಕಗಳಿಂದ ಆ ವೆಂಕಟೇಶಸ್ವಾಮಿಯ ಚರಿತ್ರೆಯನ್ನು ವರ್ಣಿಸುವ, ಆ ಆಚಾರ್ಯರಿಂದ ರಚಿತವಾದ, ನೂತನವಾದ, ಸ್ತೋತ್ರವು ಅಭೂತಪೂರ್ವವಾಗಿದೆ. ಪುಟ್ಟ ಮಾತುಗಳಿಂದ ಅಲಂಕೃತವಾಗಿದ್ದರೂ ಒಳಗೆ ಮಹಾರ್ಥಗಳಿಂದ ತುಂಬಿದೆ. ಆದ್ದರಿಂದಲೇ ಜಗತ್ತಿನಲ್ಲಿ ಬಾಲಕೃಷ್ಣ ರೂಪದ ಪರಮಾತ್ಮನ ಮುಖದಂತೆ ಕೀರ್ತಿಗೆ ಪಾತ್ರವಾಗಿದೆ.

ಸ್ತೋತ್ರಾಣಾಂ ಚಿತ್ರಕೀರ್ತಿಪ್ರತತಸುಜಗತಾಂ ವಕ್ತೃಪಾವಿತ್ರ್ಯದಾನಾಂ
ತಸ್ಮಾಚ್ಛ್ವಗ್ರೀವಮಧ್ವಪ್ರಭೃತಿಗುರುವರಪ್ರೀತಿಭೂತಿಪ್ರದಾನಮ್ ॥
ಚಿತ್ತಾರ್ಚಾದ್ಯಾಭಿಧಾನಾಮಗಣಿತಗುಣಸಂವರ್ಣನಂ ಭಾತಿ ವಿಷ್ಣೋ -
ರ್ನಾನಾಜ್ಞಾನಿಪ್ರಣೀತಸ್ತುತಿಗಣನಮಿವಾಶಕ್ಯಸಾಧ್ಯಂ ಮಮೇದಮ್ ॥ ೫೪ ॥

ಆ ಆಚಾರ್ಯರು ರಚಿಸಿದ ಸ್ತೋತ್ರಗಳು ಅದ್ಭುತ ಕೀರ್ತಿಯಿಂದ ಜಗತ್ತನ್ನು ವ್ಯಾಪಿಸಿದೆ. ವಾಚಕರಿಗೆ ಪಾವಿತ್ರ್ಯವನ್ನು ನೀಡುತ್ತಿದೆ. ಮಿಗಿಲಾಗಿ ಹಯಗ್ರೀವದೇವರ, ಮಧ್ವಾಚಾರ್ಯರೇ ಮೊದಲಾದ ಗುರುವರ್ಯರುಗಳ ಪ್ರೀತಿಯೆಂಬ ಐಶ್ವರ್ಯವನ್ನು ತಂದು ನೀಡುತ್ತಿವೆ. 'ಮಾನಸಪೂಜಾ' ಮೊದಲಾದ ಹೆಸರುಗಳುಳ್ಳ ಇಂತಹ ಸ್ತೋತ್ರಗಳ ಅಗಣಿತಗುಣಗಳನ್ನು ವರ್ಣಿಸುವುದು, ಅನೇಕ ಜ್ಞಾನಿಗಳಿಂದ ನಿರ್ಮಿತವಾದ ಪರಮಾತ್ಮನ ಸ್ತುತಿಯನ್ನು ಎಣಿಸುವುದರಂತೆ ನನಗೆ ಅಸಾಧ್ಯವಾದ ಕಾರ್ಯವಾಗಿದೆ.

ಕಾವ್ಯಾಗ್ರೀಯೋತ್ತಮಾಂಗೀಂ ಹರಿಪದನತಸದ್ದರ್ಶನಾಂ ಪ್ರಾಸಹಾಸ -
ಸ್ತುತ್ಯಾಸ್ಯಾಂ ಖಂಡಕಾವ್ಯಸ್ತನಭರನಮಿತಾಂ ವೃತ್ತವಾಸಸ್ಸುಬಂಧಾಮ್ ॥
ನಾನಾಲಂಕಾರವಂತೀಂ ಸರಸಹೃದಯಸಂದೇಶಮಾಶ್ವರ್ಪಯಂತೀಂ
ಪ್ರೇಮ್ಣಾ ಪೂರ್ಣಾಂ ಸುವರ್ಣಾಂ ಹರತಿ ಸುಕವಿತಾರುಕ್ಮಿಣೀಂ ಕಿಂ ನ ಕೃಷ್ಣಃ ॥ ೫೫ ॥

ಶ್ರೀ ಆಚಾರ್ಯರ ಶ್ರೇಷ್ಠವಾದ ಕವಿತೆಯು ರುಕ್ಮಿಣೀದೇವಿಯಂತೆ ಸುಂದರವಾಗಿದೆ. ಈ ರುಕ್ಮಿಣೀದೇವಿಗೆ 'ಗುರುವೈಭವ' ಮಹಾಕಾವ್ಯವೇ ಉತ್ತಮಾಂಗ (ಶಿರಸ್ಸು). ಶ್ರೀ ಹರಿಯ ಚರಣಗಳಲ್ಲಿ ಬಗ್ಗಿ ನಮಿಸುವ ಶ್ರೀಮದಾಚಾರ್ಯರ ಶ್ರೇಷ್ಠ ದರ್ಶನ (ಶಾಸ್ತ್ರ)ವೇ ಈ ರುಕ್ಮಿಣಿಗೆ ಶ್ರೀಕೃಷ್ಣನ ಪಾದಗಳನ್ನು ನೋಡುವ, ಲಜ್ಜೆಯಿಂದ ಬಾಗಿದ ಸುಂದರ ಕಣ್ಣುಗಳು. ಪ್ರಾಸವೆಂಬುವ ಮಂದಹಾಸ ಬೀರುವ ಸ್ತೋತ್ರಗಳೇ ಇವಳ ವದನ. 'ತೀರ್ಥಕ್ಷೇತ್ರವಿಲಾಸ' 'ವಿಪ್ರಸಂದೇಶ'ವೆಂಬುವ ಎರಡು ಖಂಡಕಾವ್ಯಗಳೆಂಬುವ ಎರಡು ಸ್ತನಗಳ ಭಾರದಿಂದ ಎದೆ ಬಗ್ಗಿಸಿರುವ ಈ ರುಕ್ಮಿಣೀದೇವಿಯು ಒಳ್ಳೆಯ ಛಂದಸ್ಸುಗಳ ಪದ್ಮ-ಚಕ್ರ-ಇತ್ಯಾದಿ ಬಂಧಗಳೆಂಬುವ ವಸ್ತ್ರಗಳ ಬಂಧ (ಕುಚಬಂಧ-ಕಟಿಬಂಧ)ವುಳ್ಳವಳಾಗಿದ್ದಾಳೆ. ಅನೇಕವಿಧ ಅಲಂಕಾರಗಳೇ (ಅಲಂಕಾರಸಂಗ್ರಹವೇ) ಇವಳಿಗೆ ಆಭರಣಗಳು. ಭಕ್ತಿರಸದಿಂದ ಕೂಡಿದ (ನವರಸಗಳುಳ್ಳ - ವಿಷ್ಣುಸಹಸ್ರವೆಂಬುವ) ತನ್ನ ಹೃದಯದ ಸಂದೇಶವನ್ನು ಶೀಘ್ರವಾಗಿ ಅರ್ಪಿಸಿದ್ದಾಳೆ ಪ್ರೇಮಪೂರ್ಣಳಾಗಿದ್ದಾಳೆ. ಒಳ್ಳೆಯ ವರ್ಣವುಳ್ಳವಳಾಗಿದ್ದಾಳೆ. ಹೀಗೆ ಕಂಗೊಳಿಸುವ ಈ ಕವಿತೆಯೆಂಬುವ ರುಕ್ಮಿಣೀದೇವಿಯನ್ನು ಕೃಷ್ಣನಲ್ಲದೇ ಬೇರೆ ಯಾರು ಅಪಹರಿಸಲು ಶಕ್ಯ? ಅಥವಾ ಕೃಷ್ಣನು ಅಪಹರಿಸದೇ ಇರುತ್ತಾನೆಯೇ? (ಅಂದರೆ - ಶ್ರೀ ಆಚಾರ್ಯರ ಕವಿತೆ ಕೃಷ್ಣನಿಗಾಗಿಯೇ ಮೀಸಲಾಗಿತ್ತು. ಆದ್ದರಿಂದಲೇ ಶ್ರೀಕೃಷ್ಣನು

ಅದನ್ನು ಸ್ವೀಕರಿಸುವುದು ಉಚಿತ. ಶ್ರೀಕೃಷ್ಣಾರ್ಪಣಮಸ್ತು ಎನ್ನುವುದರ ಚಿತ್ರಣವಿದು. ಹಾಗೆಯೇ ಶ್ರೀ ಆಚಾರ್ಯರ ಸಮಗ್ರ ಕವಿತೆಯ ಏಕತ್ರ ಸಮಗ್ರವಾದ ಚಿತ್ರಣವೂ ಸಹ ಆಗಿದೆ).

ನಿತ್ಯಂ ಸಿದ್ಧಾಂತಸೇವಾರತಸಕಲಕರಾನೇಕ ಶಾಖಾಸುರೇಖಾ -
ಽಗಣ್ಯಾನ್ಯಾಯೋಕ್ತ್ಯರಣ್ಯಾನಲತುಲವಿಲಸತ್ಪುಣ್ಯವಾಣೀಹಿರಣ್ಯೈಃ ॥
ಅರ್ವಾಚೀನೋಽಪಿ ಚಾರ್ವಾಕೃತಿರಯಮಯತೇ ಟಿಪ್ಪಣೀಕಾರನಿಷ್ಠಂ
ಪ್ರಾಚೀನತ್ವಂ ಜನಾನಾಮಿತಿ ಸಮಯತಿ ಸಮ್ಮಾನತಾಂ ಚಾಭಿಮಾನಮ್ ॥೫೬॥

ಪ್ರತಿನಿತ್ಯವೂ ಶ್ರೀ ಮಧ್ವಸಿದ್ಧಾಂತಸೇವೆಯಲ್ಲೇ ಆಸಕ್ತವಾದ ಆ ಆಚಾರ್ಯರ ಗ್ರಂಥಗಳನ್ನು ಕೈಗಳಲ್ಲಿರುವ ಅನೇಕವಾದ ಬೆರಳುಗಳ ಎಲ್ಲ ರೇಖೆಗಳಿಂದಲೂ ಎಣಿಸಲು ಸಾಧ್ಯವಾಗುವುದಿಲ್ಲ. ಅನ್ಯಾಯವಾದ (ಯುಕ್ತಿರಹಿತವಾದ) ಮಾತುಗಳೆಂಬ ಅರಣ್ಯಕ್ಕೆ ಬೆಂಕಿಯ ಸಮವಾದ ಪುಣ್ಯಕರವಾದ ಆ ಗ್ರಂಥಗಳೇ ಆಚಾರ್ಯರ ಬಳಿ ಇದ್ದ ಬಂಗಾರ. "ಹೀಗೆ ಸುಂದರವಾದ ಅನೇಕ ಗ್ರಂಥಗಳನ್ನು ರಚಿಸಿದ ಶ್ರೀ ಆಚಾರ್ಯರು ಅರ್ವಾಚೀನರಾಗಿದ್ದರೂ ಸಹ ಟಿಪ್ಪಣೀಕಾರರಲ್ಲಿರುವ ಪ್ರಾಚೀನತ್ವವನ್ನು ಸಂಪಾದಿಸಿದ್ದಾರೆ. (ಪ್ರಾಚೀನ ಟೀಕಾಟಿಪ್ಪಣೀಕಾರರ ಸಾಲಿನಲ್ಲಿ ಪರಿಗಣಿಸುವಂತಹವರಾಗಿರುತ್ತಾರೆ)" ಎಂಬುವ ಜನರ ಅಭಿಮಾನವು ಸಮ್ಮಾನತ್ವವನ್ನೇ ಸಂಪಾದಿಸಿತ್ತು. (ಅಂದರೆ - ಈ ಅಭಿಮಾನ ಜನರಿಗೆ ಒಂದು ಸಮ್ಮಾನ - ಗೌರವರೂಪವಾಗಿತ್ತು. ಅಥವಾ, ಈ ಅಭಿಮಾನ ಸಮ್ಮಾನತೆ - ಶ್ರೇಷ್ಠ ಪ್ರಾಮಾಣ್ಯವನ್ನೇ ಹೊಂದಿತ್ತು ಎಂದು ಭಾವವು).

ಭಾಷಾಲೇಶೇನ ಲಭ್ಯೇ ಜಗತಿ ಬಹುವಿಧೇ ಮಾನನೇಽಪಿ ಸ್ವಕಾವ್ಯ -
ಪ್ರೌಢಗ್ರಂಥಾದಿಜಾತಂ ಕೃತಮಖಿಲಜಿತಃ ಕೇವಲಂ ಪೂಜನಾರ್ಥಮ್ ॥
ಮತ್ಕೃತ್ಯಂ ಪಶ್ಯತೇತ್ಥಂ ಸುಕೃತಹತಿಭಿಯಾ ಯಾಗವತ್ತೇನ ನೋಕ್ತಂ
ತಸ್ಮಾದಸ್ಯ ಪ್ರಬಂಧಪ್ರಣಯನವಿಷಯೇ ವರ್ಣನಂ ವಿಶ್ವಮಾನ್ಯಮ್ ॥ ೫೭॥

ಜಗತ್ತಿನಲ್ಲಿ ಭಾಷಾಲೇಶದಿಂದ (ಹರಕು ಮುರುಕು ಮಾತಿನಿಂದ) ಲೇ ಬಹಳ ತರಹದ ಪ್ರಶಸ್ತಿ ಪುರಸ್ಕಾರಗಳೂ ದೊರೆಯುತ್ತಿದ್ದರೂ ಆ ಆಚಾರ್ಯರು ತಮ್ಮ ಕಾರ್ಯಗಳನ್ನು ಪ್ರೌಢಗ್ರಂಥಗಳನ್ನೂ ಸಹ ಸಕಲಜೈತ್ರವಾದ ಶ್ರೀ ಹರಿಯ ಸೇವೆಗಾಗಿ ಮಾತ್ರವೇ ರಚಿಸಿದರು. ಪುಣ್ಯನಾಶವಾಗುವ ಭಯದಿಂದ ಯಾಗವನ್ನು ಹೇಗೋ ಹಾಗೇ 'ನಾನೇ ಮಾಡಿದ್ದೇನೆ - ನೋಡಿರಿ' ಎಂದು ಎಂದೂ ಹೇಳಲಿಲ್ಲ. ಆದ್ದರಿಂದ ಆ ಆಚಾರ್ಯರನ್ನು ಗ್ರಂಥನಿರ್ಮಾಣದ ವಿಷಯವಾಗಿ ವರ್ಣಿಸುವುದು ಜಗನ್ಮಾನ್ಯವಾಗಿದೆ.

ಆರ್ಯಸ್ಯಾಮರ ಭಾರತೀವಿರಚಿತಸ್ತೋತ್ರೌಘವದ್ರಾಜತೇ
ಹೃದ್ಯಾವದ್ಯವಿದೂರಪದ್ಯನಿಚಯಃ ಕಾರ್ಣಾಟವಾಣ್ಯಾ ಕೃತಃ ॥

**ಸಾಧ್ವೀನಾಮಧುನಾಽಪಿ ಭಾತಿ ಮಧುರಾಂ ಸದ್ಭಕ್ತಿಭುಕ್ತಿಂ ದದ -**
**ದ್ಯೋ ದಿವ್ಯಾಕ್ಷಯಪಾತ್ರಚಿತ್ರಸುಯಶಃಪೀಯೂಷಪಾತ್ರಾಯಿತಃ ॥ ೫೮ ॥**

ಕನ್ನಡ ನುಡಿಗಳಿಂದ ನಿರ್ಮಿತವಾದ ಶ್ರೀ ಆಚಾರ್ಯರ ಸುಂದರವೂ ನಿರ್ದುಷ್ಟವೂ ಆದ ಹಾಡುಗಳ ಸಂಕಲನವು ಆ ಆಚಾರ್ಯರು ದೇವವಾಣಿಯಾದ (ಸಂಸ್ಕೃತದಿಂದ) ರಚಿಸಿದ ಸ್ತೋತ್ರಗಳಂತೆಯೇ ವಿರಾಜಿಸುತ್ತಿದೆ. ಆ ಹಾಡುಗಳು ಸುಮಂಗಲ ಸ್ತ್ರೀಯರಿಗೆ ಈಗಲೂ ಸಹ ನಿರ್ಮಲವಾದ ಭಕ್ತಿಯೆಂಬ ಮಧುರವಾದ ಭುಕ್ತಿ(ಭೋಜನ)ಯನ್ನು ನೀಡುತ್ತಾ, ದಿವ್ಯವಾದ ಅಕ್ಷಯಪಾತ್ರೆಯ ಅದ್ಭುತಯಶಸ್ಸೆಂಬ ಅಮೃತಕ್ಕೆ ಪಾತ್ರೆಯಂತೆ ಆಶ್ರಯವಾಗಿದೆ.

**ಗ್ರಂಥಾನ್ನ ಪ್ರಕಟಾನ್ ವ್ಯಧಾದಿತಿ ಬುಧೋ ವಿದ್ಯಾವಿಲುಬ್ಧೋಽಪಿ ನೋ**
**ದುರ್ಗ್ರಂಥಪ್ರಹತಿಪ್ರದಪ್ರಕಟನೈಃ ಕ್ಷಿಪ್ರಂ ಸತಃ ಪ್ರೀಣಯನ್ ॥**
**ಯಶ್ಚಕ್ರೇ ಸ್ವಪದಾಶ್ರಿತಾನತಿಜಡಾನ್ ಶಿಷ್ಯಾಂಶ್ಚ ಲೋಕೇ ಚಲ -**
**ದ್ಗ್ರಂಥಾನ್ ದುರ್ಮತನಾಶನೇ ಚ ಕುಶಲಾನ್ ತಸ್ಮಿನ್ ಕಥಂ ಲುಬ್ಧತಾ ॥ ೫೯ ॥**

'ನಾನು ಮಾಡಿದ್ದೇನೆ, ನೋಡಿರಿ'ಎಂದು ಹೇಳುತ್ತಿರಲಿಲ್ಲವೆಂದು ಹಿಂದೆ (೫೭ ಶ್ಲೋಕ) ತಿಳಿಸಿದಂತೆ ಆ ಧೀರರಾದ ಆಚಾರ್ಯರು ಗ್ರಂಥಗಳನ್ನು ಬಹಿರಂಗಗೊಳಿಸದೇ ಇದ್ದುದರಿಂದ 'ವಿದ್ಯಾಲೋಭಿಗಳು'ಎಂದೂ ಆಗಿರಲಿಲ್ಲ. ಏಕೆಂದರೆ ದುಷ್ಟಗ್ರಂಥಗಳು ಪ್ರಕಟವಾದಾಗ ಅದನ್ನು ಖಂಡಿಸುವ ಗ್ರಂಥದ ಪ್ರಕಟನೆಯನ್ನು ಸಜ್ಜನರ ಆನಂದಕ್ಕಾಗಿ ಶೀಘ್ರವಾಗಿ ನಡೆಸುತ್ತಿದ್ದರು. ಎಲ್ಲದುದಕ್ಕಿಂತ ಮಿಗಿಲಾಗಿ ತಮ್ಮ ಪಾದವನ್ನು ಅವಲಂಬಿಸಿರುವ ಅತ್ಯಂತ ಜಡರಾದಂತಹ ಶಿಷ್ಯರನ್ನೂ ಸಹ ಇಂದು ಲೋಕದಲ್ಲಿ ಚಲಿಸುವ ಗ್ರಂಥಗಳನ್ನಾಗಿ ಹಾಗೂ ದುರ್ಮತಗಳನ್ನು ಖಂಡಿಸುವುದರಲ್ಲಿ ಚತುರರನ್ನಾಗಿ ಮಾಡಿದಂತಹ ಆ ಆಚಾರ್ಯರಿಗೆ ಲೋಭವು ಹೇಗೆ ಇರುತ್ತದೆ?

**ಪೀಠಾಧೀಶ್ವರ ಸೋದರಪ್ರಭೃತಯೋ ನಾನಾಪ್ರದೇಶಸ್ಥಿತಾಃ**
**ವಿಪ್ರಾ ವೈದಿಕಧರ್ಮಮಾತ್ರನಿರತಾ ಯಚ್ಛಾತ್ರತಾಮಾಗತಾಃ ॥**
**ವಿದ್ಯಾದಾನಕೃತಿಪ್ರಕಾಶಮಧುರೋಪನ್ಯಾಸತೃಪ್ತಾಶ್ರಿತಾಃ**
**ತಚ್ಛ್ರೀತ್ಯಾಕೃತಿಶಿಷ್ಯಸಂತತಿನುತಿರ್ನೂನಂ ಮಹಾಸಾಹಸಮ್ ॥ ೬೦ ॥**

ಪೀಠಾಧಿಪತಿಯಿಂದ ಆರಂಭಿಸಿ ಸೋದರನವರೆಗೆ ಅನೇಕ ವಿಧರಾದ ಅನೇಕ ದೇಶಗಳಲ್ಲಿರುವ ಬ್ರಾಹ್ಮಣರು ಆ ಆಚಾರ್ಯರ ಶಿಷ್ಯತ್ವವನ್ನು ಹೊಂದಿದವರಾಗಿ ಕೇವಲ ವೈದಿಕ ಧರ್ಮದಲ್ಲಿಯೇ ಆಸಕ್ತರಾಗಿದ್ದಾರೆ. ಹಾಗೂ ವಿದ್ಯಾದಾನದಿಂದ ಗ್ರಂಥಪ್ರಕಾಶನೆಯಿಂದ ಮತ್ತು ಮಧುರವಾದ ಉಪನ್ಯಾಸದಿಂದ ಆಶ್ರಿತ ಸಜ್ಜನರನ್ನು ತೃಪ್ತರನ್ನಾಗಿಸುತ್ತಿದ್ದಾರೆ. ಹೀಗೆ ವಿರಾಜಿಸುವ ಆ

ಆಚಾರ್ಯರ ಪ್ರೀತಿಯ ಮೂರ್ತಿಗಳಾದ ಆ ಶಿಷ್ಯರ ಸಂತಾನವನ್ನು ವರ್ಣಿಸುವುದು ನಿಜವಾಗಿಯೂ ದೊಡ್ಡ ಸಾಹಸವೇ ಆಗಿದೆ.

ಶಿಷ್ಯತ್ವಂ ಖಲು ಯಸ್ಯ ಶುಭ್ರಯಶಸೋ ವಿಶ್ವಪ್ರಶಸ್ತೀಯತೇ
ಯದ್ಗ್ರಂಥಸ್ತುತಿರದ್ಭುತಾ ಗುರುಗುಣಸ್ತೋತ್ರಾಯತೇ ನೂತನಾ ॥
ಸತ್ಯಧ್ಯಾನಯತೀಶ್ವರಸ್ಯ ಕರುಣಾ ಯನ್ಮೂರ್ಧ್ನಿ ರತ್ನಾಯತೇ
ತಚ್ಛಾತ್ರವ್ರಜವರ್ಣನಂ ಶ್ರವಣಯೋರ್ಭೂಷಾಯತೇ ಶೃಣ್ವತಾಮ್ ॥ ೬೧ ॥

ನಿರ್ಮಲ ಕೀರ್ತಿವಂತರಾದ ಆ ಆಚಾರ್ಯರ ಶಿಷ್ಯತ್ವವು (ರಾಷ್ಟ್ರ ಪ್ರಶಸ್ತ್ಯಾದಿಗಳಿಗಿಂತ ಹೆಚ್ಚಾದ) ವಿಶ್ವ ಪ್ರಶಸ್ತಿಯಂತೆ ಆಗಿದೆ. ಆ ಆಚಾರ್ಯರ ಗ್ರಂಥಗಳ ಅದ್ಭುತವಾದ ಸ್ತೋತ್ರವು ನೂತನ ಗುರು ಗುಣಸ್ತವನದಂತೇ ಆಗಿದೆ. ಆ ಆಚಾರ್ಯರ ಶಿರಸ್ಸಿನಲ್ಲಿ ಶ್ರೀ ಸತ್ಯಧ್ಯಾನತೀರ್ಥರ ಕಾರುಣ್ಯವು ರತ್ನದಂತೆ ಕಂಗೊಳಿಸುತ್ತಿದೆ. ಇಂತಹ ಆಚಾರ್ಯರ ಶಿಷ್ಯಸಂತತಿಯ ವರ್ಣನೆಯು ಶ್ರವಣಮಾಡುವವರ ಶ್ರವಣಗಳಿಗೆ (ಕಿವಿಗಳಿಗೆ) ಸುಂದರ ಆಭರಣವೇ ಆಗಿದೆ.

ವ್ಯಾಸಾರ್ಯಪ್ರತತಯಶಃಪ್ರಭೂತಸಂಪದ್ವೇದಾಂತಾವನರತಮಾಧ್ವಪೀಠರಾಜ್ಯೇ ॥
ರಾಜೇವ ದ್ವಿಜನಿಚಯೇ ವಿರಾಜಮಾನಃ ಲಕ್ಷ್ಮೀಶಸ್ತದಮಲವಿದ್ಯಯಾತಿರೇಜೇ ॥ ೬೨ ॥

ಶ್ರೀ ವ್ಯಾಸರಾಜರ ವಿಸ್ತಾರವಾದ ಯಶಸ್ಸೆಂಬ ಸಂಪತ್ತಿನಿಂದ ತುಂಬಿರುವ, ವೇದಾಂತವನ್ನು ರಕ್ಷಿಸುವುದರಲ್ಲಿ ಆಸಕ್ತವಾದ ಮಾಧ್ವ ಪೀಠವೆಂಬ ರಾಜ್ಯದಲ್ಲಿ, ಬ್ರಾಹ್ಮಣರ ಮಂಡಲಿಯಲ್ಲಿ ರಾಜರಂತೆ ವಿರಾಜಿಸುವ ಶ್ರೀ ಲಕ್ಷ್ಮೀಶತೀರ್ಥರು ಆ ಆಚಾರ್ಯರ ವಿದ್ಯೆಯಿಂದ ಬಹಳ ವಿಜೃಂಭಿಸಿದರು.

ಲಕ್ಷ್ಮೀಶೋಽಲಭತ ಗುರುತ್ವಮಾಶ್ರಮೇಣ
ಧ್ಯಾನಾರ್ಯಾಶ್ರಯಣಗುಣೇನ ಮಿತ್ರಭಾವಮ್ ॥
ಶಿಷ್ಯತ್ವಂ ತದುದಿತವಿದ್ಯಯಾಸ್ಯ ಭೇಜೇ
ತಚ್ಚಿತ್ರಂ ತ್ರಯಮಿಹ ದುರ್ಲಭಂ ನಿವಿಷ್ಟಮ್ ॥ ೬೩ ॥

ಶ್ರೀ ಲಕ್ಷ್ಮೀಶತೀರ್ಥರು ಆಶ್ರಮದಿಂದ (ಯತ್ಯಾಶ್ರಮದಿಂದ) ಆ ಆಚಾರ್ಯರಿಗೆ ಗುರುಗಳಾಗಿದ್ದರು. ಶ್ರೀ ಸತ್ಯಧ್ಯಾನತೀರ್ಥರನ್ನು ಆಶ್ರಯಿಸುವ ಗುಣದಿಂದ (ಸತೀರ್ಥರಾದ್ದರಿಂದ) ಮಿತ್ರರೂ ಆಗಿದ್ದರು. ಆ ಆಚಾರ್ಯರು ಹೇಳಿದ ವಿದ್ಯೆಯಿಂದ ಶಿಷ್ಯರಂತೆಯೂ ಆಗಿದ್ದರು. ಹೀಗೆ ಬಹಳ ದುರ್ಲಭವಾದ ಆ ಆಚಾರ್ಯರ ಗುರುತ್ವ - ಮಿತ್ರತ್ವ - ಶಿಷ್ಯತ್ವವೆಂಬ ಈ ಮೂರು ಧರ್ಮಗಳು ಅವರೊಬ್ಬರಲ್ಲಿಯೇ ಸೇರಿದ್ದವು. ಇದು ಆಶ್ಚರ್ಯವು!

ಶ್ರೀರಂಗೇ ಯತಿಪತಿನಾ ಚ ಚಂದ್ರಿಕಾಯಾಃ
ಟೀಕಾಕೃದ್ಗುರುವರಸನ್ನಿಧೌ ಸುಧಾಯಾಃ ॥
ತೇನಾಽಚೀಕರತ ಸುಮಂಗಲೋತ್ಸವಂ ಯ -
ಸ್ಸಾಮರ್ಥ್ಯಂ ನನು ವಚನಸ್ಯ ದಿವ್ಯಮಸ್ಯ ॥ ೬೪ ॥

ಶ್ರೀರಂಗ ಕ್ಷೇತ್ರದಲ್ಲಿ ತಾತ್ಪರ್ಯ ಚಂದ್ರಿಕಾ ಗ್ರಂಥದ ಮಂಗಳ ಮಹೋತ್ಸವವನ್ನು, ಹಾಗೂ ಶ್ರೀಟೀಕಾಚಾರ್ಯರ ಸನ್ನಿಧಾನದಲ್ಲಿ (ಮಳಖೇಡದಲ್ಲಿ) ಶ್ರೀಮನ್ನ್ಯಾಯಸುಧಾಮಂಗಳ ಮಹೋತ್ಸವವನ್ನು ಆ ಆಚಾರ್ಯರು ಆ ಯತಿವರ್ಯರಿಂದ ನೆರವೇರಿಸಿದರು. ಇಂತಹ ಆಚಾರ್ಯರ ವಾಕ್ ಸಾಮರ್ಥ್ಯವು ನಿಜವಾಗಿಯೂ ದಿವ್ಯವಾದದ್ದು.

ಸದ್ವಾತಾಶನಶಯನೇ ಚ ತಾಂಡವಸ್ಯ
ಮಾಧ್ವಾನಾಂ ವಿಜಯದಮಂಗಲೋತ್ಸವೇನ ॥
ಸಂಪ್ರಾಪ್ತಸ್ವವಿತತಕೀರ್ತಿಸೌರಭಸ್ಯ
ಲಕ್ಷ್ಮೀಶಂ ಕುಸುಮಮಿವಾತನೋತ್ಸ ಮೂಲಮ್ ॥ ೬೫ ॥

ಆ ಆಚಾರ್ಯರು ಶ್ರೀ ಅನಂತಶಯನ ಕ್ಷೇತ್ರದಲ್ಲಿ ಮಾಧ್ವರಿಗೆಲ್ಲ ವಿಜಯಪ್ರದವಾದ ತರ್ಕತಾಂಡವದ ಮಂಗಳೋತ್ಸವದಿಂದ ಸಂಪಾದಿತವಾದ ತಮ್ಮ ವಿಸ್ತಾರವಾದ ಯಶಸ್ಸೆಂಬ ಸೌಗಂಧ್ಯಕ್ಕೆ ಶ್ರೀ ಲಕ್ಷ್ಮೀಶತೀರ್ಥರನ್ನೇ ಹೂವಿನಂತೆ ಮೂಲವನ್ನಾಗಿ ಮಾಡಿದರು.

ಕ್ಷೇತ್ರೇಷು ದ್ವಿಜಮಹಿತೇಷು ಮಂಗಲಾನಿ
ಗ್ರಂಥಾನಾಂ ಗುರುವರಕರ್ತೃಸನ್ನಿಧಾನೇ ॥
ತೇನಾಯಂ ಯತಿಪತಿನಾ ಚ ಕಾರಯನ್ ಸನ್
ಚಕ್ರೇಽಲಂ ಗುರುವಚನಾಮೃತಾಬ್ಧಿಪೂರ್ತಿಮ್ ॥ ೬೬ ॥

ಶ್ರೀ ಆಚಾರ್ಯರು ಹೀಗೆ, ಬ್ರಾಹ್ಮಣರಿಂದ ಪೂಜಿಸಲ್ಪಡುವ ಅನೇಕ ಕ್ಷೇತ್ರಗಳಲ್ಲಿ ಶ್ರೇಷ್ಠ ಗುರುಗಳಾದ ಗ್ರಂಥಕಾರರ ಸನ್ನಿಧಾನದಲ್ಲಿ ಆ ಗ್ರಂಥಗಳ ಮಂಗಳೋತ್ಸವಗಳನ್ನು ಆ ಯತಿವರ್ಯರಾದ ಶ್ರೀಲಕ್ಷ್ಮೀಶತೀರ್ಥರಿಂದ ಮಾಡಿಸುತ್ತ ಶ್ರೀ ಸತ್ಯಧ್ಯಾನತೀರ್ಥರ ಆಜ್ಞೆಯನ್ನು ಪೂರ್ಣಗೊಳಿಸಿದರು.

ಶೇಮುಷ್ಯಾ ಅನವರತಂ ಪರಿಶ್ರಮೇಣ
ದುರ್ವಾದೇ ಕರಿಣಿ ಹರೇಃ ಪರಾಕ್ರಮೇಣ ॥
ಆರ್ಯಸ್ಯ ದ್ವಿತಯಸಹೋದರೇ ಚ ಶಿಷ್ಯ -
ಶ್ರೇಷ್ಠತ್ವಂ ಲಸತಿ ಯತೌ ಯಥಾಽಽಶ್ರಮೇಣ ॥ ೬೭ ॥

ಯತಿಗಳಾದ ಶ್ರೀ ಲಕ್ಷ್ಮೀಶತೀರ್ಥರಲ್ಲಿ ಆಶ್ರಮದಿಂದ ಹೀಗೆ ಶ್ರೇಷ್ಠತ್ವವಿದೆಯೋ ಹಾಗೆ ವಿಶ್ರಾಂತಿಯಿಲ್ಲದೇ ನಿರಂತರವಾದ ಬೌದ್ಧಿಕ ಪರಿಶ್ರಮದಿಂದ, ಹಾಗೂ ದುರ್ವಾದಗಳೆಂಬ

ಆನೆಗಳ ಮೇಲೆ ಸಿಂಹದಂತೆ ಪರಾಕ್ರಮದಿಂದ, ಆಚಾರ್ಯರ ದ್ವಿತೀಯ ಸಹೋದರರಲ್ಲಿ ಶಿಷ್ಯಶ್ರೇಷ್ಠತ್ವವು ಶೋಭಿಸುತ್ತಿದೆ.

ದುರ್ಧರ್ಷೋ ಮಿತಧಿಷಣೈರಯಂ ಮನೀಷೀ
ಶ್ರೀಹರ್ಷೋಽಖಿಲಮತಖಂಡನೌದನೇನ ॥
ಆದರ್ಶೋ ವಿಶದವಿಚಾರದರ್ಶನೇನ
ಶೀರ್ಷಸ್ಯೋತ್ತಮಜನುಷೋ ವಿಶೋಭತೇಽಲಂ ॥ ೬೮ ॥

ಆ ಆಚಾರ್ಯರ ಸಹೋದರರನ್ನು ಅಲ್ಪಮತಿಗಳು ಕೆಣಕಲೂ ಶಕ್ತರಾಗುವುದಿಲ್ಲ. ಇನ್ನು ಎಲ್ಲ ಜನರ ಅಭಿಮತವಾದ ವಿಷಯದ ಖಂಡನೆಯೆಂಬ ಖಾದ್ಯದಿಂದ ಶ್ರೀಹರ್ಷನಂತೇ ಇದ್ದಾರೆ. ಆದರೆ ಸ್ವಚ್ಛವಾದ ವಿಚಾರದ ದೃಷ್ಟಿಯಿಂದ ಅಣ್ಣನ ಮೆದುಳಿಗೆ ಕನ್ನಡಿಯಂತೆ ಶೋಭಿಸುತ್ತಿದ್ದಾರೆ.

ಆಚಾರ್ಯಪ್ರಖರಕೃತಿಪ್ರಭಾಕರೇಷು
ರಾಜತ್ಸು ಪ್ರತಿಮತದಸ್ಯುಭೀತಿದೇಷು ॥
ಚಂದ್ರಾಭಾ ಜಗತಿ ಜಯಂತಿ ತತ್ಕೃತೀಂದ್ರಾ
ಮಂದಾಕ್ಷ್ಯುತ್ಪಲಸುಖದಾನುವಾದಭಾಸಾಃ ॥ ೬೯ ॥

ಶ್ರೀ ಆಚಾರ್ಯರ ಗ್ರಂಥಗಳು ಸೂರ್ಯನಂತೆ ತೀಕ್ಷ್ಣವಾಗಿ ಪರಮತಗಳೆಂಬ ಕಳ್ಳರಿಗೆ ಭಯಂಕರವಾಗಿ ವಿರಾಜಿಸುತ್ತಿದ್ದರೆ, ಆ ಆಚಾರ್ಯರ ಸಹೋದರರ ಗ್ರಂಥಗಳು ಮಂದಮತಿಗಳ ಕಂಗಳೆಂಬ ನೈದಿಲೆಗಳಿಗೆ ಆನಂದ ನೀಡುವ ಅನುವಾದಗಳೆಂಬ ಚಂದ್ರಿಕೆಯುಳ್ಳದ್ದಾಗಿ ಚಂದ್ರನಂತೆ ಶೋಭಿಸುತ್ತಿವೆ.

ಸಂಗೀತೇ ವರಜ ಇವಾನುಜೋಽರ್ಧ್ವಕಸ್ಯ
ಚಾತುರ್ಯಂ ವಿದಧದಮೋಘವಾದನೇಽಯಮ್ ॥
ಅಗ್ರೇಜಂ ತಮನುಸಸಾರ ಧೀರರಾಜಃ
ಗಾನಂ ಸಲ್ಲಯಲಸಿತಂ ಯಥಾ ಹಿ ತಾಲಮ್ ॥ ೭೦ ॥

ಅಣ್ಣನು ಸಂಗೀತದಲ್ಲಿದ್ದಂತೆ 'ತಬಲಾ' ವಾದ್ಯವನ್ನು ಅಮೋಘವಾಗಿ ಬಾರಿಸುವುದರಲ್ಲಿ ತನ್ನ ಚಾತುರ್ಯವನ್ನು ತೋರಿಸುವ ಆ ಸಹೋದರರು ಒಳ್ಳೆಯ ಲಯ ವಿಲಾಸವುಳ್ಳ ಗಾಯನವನ್ನು ತಾಳವು ಅನುಸರಿಸುವಂತೆ ಆ ಅಣ್ಣಂದಿರನ್ನು ಅನುಸರಿಸಿದ್ದರು.

ಸಂಪ್ರೀತಾಗ್ರಜಸುಖತೀರ್ಥವಿಷ್ಣುತೀರ್ಥಃ
ವಿದ್ಯಾಧೀಶ್ವರಸಹಜಾತಕೇಶವಾರ್ಯಃ ॥
ಕೋ ವೇತ್ತುಂ ನ ಚ ವಿದಿತಸ್ಸ ಕೇಶವಾರ್ಯಃ
ವಿದ್ಯಾಧೀಶ್ವರಸುಖತೀರ್ಥದಾರ್ಯದಾಸಃ ॥ ೭೧ ॥

ಸುಖತೀರ್ಥರೆಂಬ ಅಣ್ಣನನ್ನು ಸಂಪ್ರೀತಿಗೊಳಿಸಿದ ವಿಷ್ಣುತೀರ್ಥರೋ? ಅಥವಾ ಶ್ರೀವಿದ್ಯಾಧೀಶತೀರ್ಥರ ಸಹೋದರರಾದ ಕೇಶವಾಚಾರ್ಯರೋ? ಯಾರಿರಬಹುದೆಂದು ಆ ಕೇಶವಾಚಾರ್ಯರನ್ನು ಗುರುತಿಸಲಾಗಲಿಲ್ಲ. ಕಾರಣ ವಿದ್ಯಾಧೀಶ (ವಿದ್ಯೆಯಲ್ಲಿ ಪ್ರಭುವಿನಂತಿರುವ)ರಾದ ಹಾಗು ಸುಖತೀರ್ಥ (ಸುಖಕರವಾದ ಶಾಸ್ತ್ರ)ವನ್ನು ನೀಡುವ ಶ್ರೀ ಆಚಾರ್ಯರ ದಾಸರಾಗಿದ್ದರು.

**ವಿಖ್ಯಾತೇ ಕ್ರತುನಗರೇಽಗ್ರಜಪ್ರವೃತ್ತಂ ವಿಜ್ಞಾನಕ್ರತುಮತುಲಂ ತನೋತಿ ಯೋಽಲಮ್ ॥**
**ತಸ್ನಾನಾಸ್ತುತಿರಪಿ ಮಜ್ಜನಾಯತೇ ಮೇ ತದ್ವರ್ಯಾಗ್ರಜಕರುಣಾರ್ಣವೇ ಸದೈವ ॥ ೭೨ ॥**

ಪ್ರಸಿದ್ಧವಾದ 'ಯಜ್ಞಪುರೀ' ಎಂದೆನಿಸಿದ ಗದಗ ನಗರದಲ್ಲಿ ಅಣ್ಣನಿಂದ ಪ್ರವೃತ್ತವಾದ ಜ್ಞಾನಯಜ್ಞವನ್ನು ಅವರು ಈಗಲೂ ಅದ್ಭುತವಾಗಿ ಮಾಡುತ್ತಿದ್ದಾರೆ. ಅಂತಹ ಆ ಕೇಶವಾಚಾರ್ಯರ ಅನೇಕ ಗುಣಗಳ ವರ್ಣನೆ ಅವರ ಅಗ್ರಜರಾದ ಆಚಾರ್ಯರ ಕಾರುಣ್ಯ ಸಾಗರದಲ್ಲಿ ನನಗೆ ಸ್ನಾನದಂತೆ ಆಗಿದೆ.

**ಸೌಂದರ್ಯದ್ಯುತಿಜಿತಗಂಧಸಾರ ಮೂರ್ತಿಃ**
**ಬಾಹೀಕದ್ವಿಗುಣಿತರಮ್ಯಹಾರ್ದಕೀರ್ತಿಃ ॥**
**ಆಚಾರ್ಯಾಶ್ರಿತಿನಿಹತಾಖಿಲಾಂತರಾರ್ತಿಃ**
**ಭೀಮಾಖ್ಯೋಽಭಜದಿಮಮಾಪ್ತಭಕ್ತಿಭೂತಿಃ ॥ ೭೩ ॥**

ಗಂಧದ ಗೊಂಬೆಯನ್ನು ಗೆಲ್ಲುವಂತಹ ಸೌಂದರ್ಯದ ಸಿರಿಯುಳ್ಳ, ಹೊರಗಿನ ಸೌಂದರ್ಯಕ್ಕಿಂತ ಎರಡು ಪಟ್ಟು ಹೆಚ್ಚು ಸುಂದರವಾದ ಹೃದಯದ ಕೀರ್ತಿಯುಳ್ಳ, ಆಚಾರ್ಯರನ್ನು ಆಶ್ರಯಿಸಿರುವುದರಿಂದ ಎಲ್ಲ ಆಂತರಿಕ ಕ್ಲೇಶಗಳನ್ನು ಕಳೆದುಕೊಂಡ, (ಸಂತೇಬಿದನೂರು) ಭೀಮಸೇನಾಚಾರ್ಯರೆಂಬುವರು ಆ ಆಚಾರ್ಯರನ್ನು ಭಕ್ತಿಯೆಂಬ ಐಶ್ವರ್ಯವುಳ್ಳವರಾಗಿ ಸೇವಿಸಿದರು.

**ಶ್ರೀನ್ಯಾಯಾಮೃತಕೃತಿದೇವತಾಮ್ರಜಾತಂ**
**ಲೇಭೇಽಯಂ ಫಲಮಪಿ ಪಕ್ವಮರ್ಣವಾಖ್ಯಮ್ ॥**
**ಸತ್ಪಕ್ಷಿದ್ವಿಜಸಮುದಾಯಮಧ್ಯ ಆದೌ**
**ಕಾನೀನಾಚ್ಛುಕ ಇವ ಸಾತ್ವತಂ ಪುರಾಣಮ್ ॥ ೭೪ ॥**

ಶ್ರೀ ನ್ಯಾಯಾಮೃತವೆಂಬ ದೇವತೆಗಳ ಮಾವಿನ ಮರದಲ್ಲಿ ಹುಟ್ಟಿದ 'ನ್ಯಾಯಾಮೃತಾರ್ಣವ' ಎಂಬ ಪಕ್ವವಾದ ಹಣ್ಣನ್ನು ಈ ಭೀಮಸೇನಾಚಾರ್ಯರು ಒಳ್ಳೆಯ ಪಕ್ಷ (ಮತ) ವುಳ್ಳ ದ್ವಿಜರ ವೃಂದದ ಮಧ್ಯದಲ್ಲಿ ವೇದವ್ಯಾಸದೇವರಿಂದ ಶುಕಾಚಾರ್ಯರು ಭಾಗವತಪುರಾಣವನ್ನು ಪ್ರಥಮವಾಗಿ ಹೊಂದಿದಂತೆ ಆಚಾರ್ಯರ ಅನುಗ್ರಹದಿಂದ ಪ್ರಥಮರಾಗಿ ಪಡೆದಿದ್ದರು.

ವಾಗೀಶಾತ್ಮಜಕವಿತಾಖ್ಯರುಕ್ಮಿಣೀಸತ್ -
ಸಂದೇಶಂ ಸವಿಶದಮರ್ಪಯನ್ ಸ ಕೃಷ್ಣೇ ||
ಕುರ್ವಾಣೋಽನುವದನಮಸ್ಯ ಭಾಸತೇ ತತ್ -
ಸಂದೇಶಪ್ರದಕರವಿಪ್ರಯುಗ್ಮರೂಪಃ || ೭೫ ||

ಶ್ರೀ ವಾಗೀಶತೀರ್ಥರ ಪುತ್ರರಾದ ವಾದಿರಾಜತೀರ್ಥರ ಕವಿತೆಯು ಶ್ರೀ ರುಕ್ಮಿಣೀದೇವಿಯಂತಿದೆ. ಈ ರುಕ್ಮಿಣಿಯ ನಿರ್ಮಲ ಸಂದೇಶವೇ ರುಕ್ಮಿಣೀಶವಿಜಯ ಕಾವ್ಯ. ಅದನ್ನು ಶ್ರೀ ಕೃಷ್ಣನಲ್ಲಿ ಪ್ರವಚನಗಳಿಂದ ಅರ್ಪಿಸುತ್ತ ಕನ್ನಡ ಭಾಷೆಯಲ್ಲಿ ಅನುವಾದ ಮಾಡುವ ಆ ಭೀಮಸೇನಾಚಾರ್ಯರು ರುಕ್ಮಿಣೀ ಸಂದೇಶವನ್ನು ನೀಡಿದ ಹಾಗು ಮಾಡಿದ ಇಬ್ಬರು ವಿಪ್ರರಂತೆ ಒಬ್ಬರೇ ಶೋಭಿಸುತ್ತಿದ್ದಾರೆ. (ರುಕ್ಮಿಣೀದೇವಿಯ ಸಂದೇಶವನ್ನು ಪರಮಾತ್ಮನಿಗೆ ನೀಡಿದವರು ಶ್ರೀವಾದಿರಾಜರು. ಆ ಸಂದೇಶವನ್ನು ಕಾವ್ಯವಾಗಿ ರಚಿಸಿದರು ವಿಪ್ರಸಂದೇಶ ಮಾಡಿದ ಪೂಜ್ಯ ಆಚಾರ್ಯರು. ಇವರೀರ್ವರ ಕಾರ್ಯವನ್ನು ಮಾಡಿದಂತಿರುವುದರಿಂದ ಶ್ರೀ ಭೀಮಸೇನಾಚಾರ್ಯರು ಇವರಿಬ್ಬರಂತೆ ತೋರುತ್ತಿದ್ದಾರೆಂದು ಕವಿಯ ವರ್ಣನೆ).

ಸದ್ಗ್ರಂಥಾನುವದನಭಾನುನಾ ದಿನೇನಃ
ಸದ್ಗ್ರಂಥ ಪ್ರವಚನರೋಚಿಷಾ ನಿಶೇನಃ ||
ಆಚಾರ್ಯೋದಿತಪಥದೀಕ್ಷಿತಸ್ವಯಾನಃ
ಆಚಾರ್ಯಂ ಭಜತಿ ಸದಾ ಸ ಭೀಮಸೇನಃ || ೭೬ ||

ಒಳ್ಳೆಯ ಗ್ರಂಥಗಳ ಅನುವಾದವೆಂಬ ತೇಜಸ್ಸಿನಿಂದ ಸೂರ್ಯನಂತಿರುವ ಹಾಗೂ ಒಳ್ಳೆಯ ಗ್ರಂಥಗಳ ಪ್ರವಚನದ ಕಾಂತಿಯಿಂದ ಚಂದ್ರನಂತಿರುವ ಆ ಭೀಮಸೇನಾಚಾರ್ಯರು, ಆಚಾರ್ಯರು ಉಪದೇಶಿಸಿದ ಮಾರ್ಗದಲ್ಲಿಯೇ ತಮ್ಮ ಜೀವನಯಾನವನ್ನು ದೀಕ್ಷೆಗೊಳಿಸಿ, ನಿತ್ಯವೂ ಆಚಾರ್ಯರನ್ನು ಸೇವಿಸುತ್ತಿದ್ದಾರೆ.

ಸ್ಯಾಜ್ಜ್ಞಾನೇ ಗುರುಕೃಪಯಾ ತ್ರಿವಿಕ್ರಮತ್ವಂ ವಿಪ್ರಾಣಾಂ ತನುಮನಸಾ ಚ ವಾಮನಾಮ್ ||
ಇತ್ಯಸ್ಯೋತ್ತಮವಚಸೋ ನಿದರ್ಶನಾಭೋ ಭಾತ್ಯೇತದ್ಗುರುಕರುಣಸ್ತ್ರಿವಿಕ್ರಮಾರ್ಯಃ || ೭೭ ||

ಬುದ್ಧಿಯಿಂದ ವಾಮನ ರೂಪಿಗಳಾದ ಬ್ರಾಹ್ಮಣರು ಗುರುಗಳ ಕರುಣೆಯಿಂದ ತ್ರಿವಿಕ್ರಮರಾಗುತ್ತಾರೆಂಬ ಹಿರಿಯರ ಮಾತಿಗೆ ಶ್ರೀ ಪೂಜ್ಯಾಚಾರ್ಯರ ಮಹಾಕಾರುಣ್ಯ ಪಡೆದ ಉಮರ್ಜಿ ತ್ರಿವಿಕ್ರಮಾಚಾರ್ಯರು ದೃಷ್ಟಾಂತವಾಗಿ ತೋರುತ್ತಿದ್ದಾರೆ.

ರಾಜೇತೇ ನರಹರಿನಾಮಧಾರಿವಿಪ್ರೌ
ಸತ್ಕೃತ್ಯಾ ಸ್ವವಿಹಿತಯಾ ಸದೈವ ವಿದ್ವಾನ್ ||

**ಕುರ್ವಾಣೌ ಗುರುಕರುಣೋತ್ಥಿತಾಮ್ ಕೃತಾರ್ಥಾಂ**
**ಅರ್ಥಸ್ಸ್ಯಾನ್ನ ಹಿ ವಚಸಾ ಪ್ರಯತ್ನಸಾಧ್ಯಃ** || ೭೮ ||

'ನರಹರಿ' ಎಂಬ ಹೆಸರುಳ್ಳ ಇಬ್ಬರು ಬ್ರಾಹ್ಮಣರು, ೧ ಶಿರಹಟ್ಟಿ ನರಸಿಂಹಾಚಾರ್ಯರು ೨ಬಂಡ್ಯಾಳ ನರಸಿಂಹಾಚಾರ್ಯರು) ಗುರುಗಳಾದ ಪೂಜ್ಯ ಆಚಾರ್ಯರ ಕರುಣೆಯಿಂದ ಹುಟ್ಟಿದ ವಿದ್ಯೆಯನ್ನು ತಮಗೆ ವಿಹಿತವಾದ ಸತ್ಕರ್ಮಾಚರಣೆಯಿಂದ ಕೃತಾರ್ಥವಾಗುವಂತೆ ಮಾಡುತ್ತ ವಿರಾಜಿಸುತ್ತಿದ್ದಾರೆ. ಕಲಿತ ವಿದ್ಯೆಗೆ ಪ್ರಯತ್ನದಿಂದ ಬರುವ ಸಾರ್ಥಕ್ಯವು ಕೇವಲ ಮಾತಿನಿಂದ (ಪರೋಪದೇಶದಿಂದ) ಇಲ್ಲವಷ್ಟೇ.

**ಆಚಾರ್ಯಪ್ರವರಪದಾಬ್ಜಸೇವಕೋಽನ್ಯಃ**
**ಭಾತಿ ಶ್ರೀನಿಲಯಪದಾಭಿಧೇಯ ಆರ್ಯಃ ||**
**ಧ್ಯಾನಾರ್ಯಪ್ರವಚನವೈಭವಪ್ರಕಾಶಾತ್**
**ಯಸ್ಸ್ವಸ್ಥಂ ಸ್ವಗುರುಪದಂ ತನೋತಿ ಸಾರ್ಥಮ್** || ೭೯ ||

ಶ್ರೀ ಆಚಾರ್ಯವರ್ಯರ ಪಾದಕಮಲಗಳನ್ನು ಸೇವಿಸುವ ಬಾಳಗಾರು ಶ್ರೀನಿವಾಸಾಚಾರ್ಯರೆಂಬ ಮತ್ತೊಬ್ಬರು ಹಿರಿಯರು ಶ್ರೀ ಸತ್ಯಧ್ಯಾನತೀರ್ಥರ ವಾಗ್ವೈಭವವನ್ನು ಪ್ರಕಟಗೊಳಿಸಿ ('ಸಭಾಸಾರವೈಭವಂ' ಮೊದಲಾದ ಗ್ರಂಥಗಳ ರಚಿಸಿ) ತಮ್ಮಲ್ಲಿ ಇರುವ ತಮ್ಮ ಗುರುಗಳ ಪದವನ್ನು (ವಾಕ್ಯವನ್ನು - ಹೆಸರನ್ನು) ಸಾರ್ಥಕಗೊಳಿಸುತ್ತ ಶೋಭಿಸುತ್ತಿದ್ದಾರೆ. (ಆಚಾರ್ಯರು 'ಗುರುವೈಭವಂ' ಗ್ರಂಥದಿಂದ ಶ್ರೀ ಸತ್ಯಧ್ಯಾನತೀರ್ಥರ ವೈಭವವನ್ನು ಪ್ರಕಟಗೊಳಿಸಿದಂತೆ ಇವರು 'ಸಭಾಸಾರವೈಭವ' ಗ್ರಂಥದಿಂದ ಶ್ರೀ ಸತ್ಯಧ್ಯಾನತೀರ್ಥರ ಸೇವೆ ಮಾಡುವುದರಿಂದ ಇವರಲ್ಲಿ ಆಚಾರ್ಯರ ಉಪದೇಶ ಹಾಗು ಆಚಾರ್ಯರ 'ಶ್ರೀನಿವಾಸ'ಎಂಬ ಹೆಸರು ಎರಡೂ ಅರ್ಥಪೂರ್ಣ).

**ಆದರ್ಶೋ ಗುರುನಿಯಮೌಘದರ್ಶನೇಽಯಂ**
**ಆಕರ್ಷನ್ ಶುಭಧಿಷಣಾನ್ ಸ್ವರೂಪಭಾಸಾ ||**
**ಸಂಘರ್ಷನ್ ಪಿಷುನಮತಾಸುರೈಃ ಸುವಿದ್ಯಾಂ**
**ಸಂವರ್ಷನ್ ಸುಖಯತಿ ಸಾಧುಮಾಧ್ವಬಂಧೂನ್** || ೮೦ ||

ಗುರುಗಳಾದ ಪೂಜ್ಯ ಆಚಾರ್ಯರ ನೀತಿ ನಿಯಮಗಳಿಗೆ ಇವರು ಕನ್ನಡಿಯಂತೆ ಪ್ರತಿಬಿಂಬರಾಗಿದ್ದಾರೆ. ತಮ್ಮ ಸಹಜ ಸೌಂದರ್ಯದಿಂದ ಒಳ್ಳೆಯ ಬುದ್ಧಿವಂತರನ್ನು ಆಕರ್ಷಿಸುತ್ತಿದ್ದಾರೆ. ಹಾಗೆಯೇ ದುರ್ಮತಗಳೆಂಬ ದೈತ್ಯರೊಡನೆ ರಾಜಿಯಿಲ್ಲದೇ ಪ್ರತಿರೋಧನೀಡುತ್ತಿರುವ ಇವರು ಸದ್ವಿದ್ಯೆಯನ್ನು ವರ್ಷಿಸುತ್ತ ಸಾಧು ಸ್ವಭಾವವುಳ್ಳ ಮಾಧ್ವರೆಂಬ ಬಾಂಧವರನ್ನು ಆನಂದಗೊಳಿಸುತ್ತಿದ್ದಾರೆ.

ತದ್ರಮ್ಯಪ್ರವಚನಮಾಕ್ಷಿಕಂ ಪಿಬಂತಃ
ಸಂತಸ್ತದ್ಗುರುವಚನಾಮೃತಸ್ಯ ವಿತ್ತಿಮ್ ॥
ಆರ್ಯೋಕ್ತಿಶ್ರುತಿರಹಿತಾ ಅಪಿ ಪ್ರಯಾಂತಿ
ಶ್ರೀವಿಷ್ಣೋರ್ದರ್ಶಧಿಷಣೇಕ್ಷಯೇವ ದೇವಾಃ ॥ ೮೧ ॥

ಸಜ್ಜನರು ಅವರ ರಮ್ಯವಾದ ಪ್ರವಚನವೆಂಬ ಮಧುರಸವನ್ನು ಸವಿಯುತ್ತಾ ಅವರ ಗುರುಗಳಾದ ಪೂಜ್ಯ ಆಚಾರ್ಯರ ಪ್ರವಚನವನ್ನು ಕೇಳದೇ ಇದ್ದರೂ ಗುರುಗಳ ಪ್ರವಚನವೆಂಬ ಅಮೃತದ ಪರಿಚಯವನ್ನು ಹೊಂದುತ್ತಾರೆ. ಶ್ರೀಮದಾಚಾರ್ಯರ ದರ್ಶನದಿಂದ ದೇವತೆಗಳು ಪರಮಾತ್ಮನ ಜ್ಞಾನವನ್ನು ಹೊಂದುವಂತೆ ಇದು ಯುಕ್ತವಾಗಿದೆ. ('ಆಭಾಸಕೋಽಸ್ಯ ಪವನಃ' ಎಂಬ ಪ್ರಮಾಣದಂತೆ ಶ್ರೀಮದಾಚಾರ್ಯರು ಪರಮಾತ್ಮನ ಪ್ರತಿಬಿಂಬರಾದ್ದರಿಂದ ಅವರ ದರ್ಶನದಿಂದ ಪರಮಾತ್ಮನ ದರ್ಶನವಾಗುವಂತೆ, ಇವರ ಪ್ರವಚನವು ಪೂಜ್ಯ ಆಚಾರ್ಯರ ಪ್ರವಚನದ ಪ್ರತಿಬಿಂಬದಂತಿರುವುದರಿಂದ ಸಜ್ಜನರು ಪೂಜ್ಯ ಆಚಾರ್ಯರ ಪ್ರವಚನದ ಜ್ಞಾನವನ್ನು ಇವರ ಪ್ರವಚನವನ್ನು ಕೇಳಿ ಹೊಂದುತ್ತಿದ್ದರೆಂದು ಅಭಿಪ್ರಾಯ).

ಕಃ ಸ್ಯಾತ್ತತ್ಪಿತೃಕರುಣಾತ್ರಿಪುತ್ರಚಿತ್ರಜ್ಯೋತ್ಸ್ನಾಯಾಸ್ತತಪರಿಮಾಣವೇದನೇಽಲಮ್ ॥
ಯಲ್ಲೇಶಪ್ರಸರಣತೋ ಹಿ ಲೇಖನೀತ್ವಂ ಪ್ರಾಪ್ಯೈತತ್ಸ್ತುತಿವರಲೇಖನೇ ಮತಿರ್ಮೇ ॥೮೨॥

ಹೀಗೆ ಗುರುಗಳ ಸೇವೆ ಮಾಡುವ ಆ ಶ್ರೀನಿವಾಸಾಚಾರ್ಯರೆಂಬ ನನ್ನ ಪಿತೃಪಾದರ ಕರುಣೆಯೆಂಬ ಚಂದಿರನ ಬೆಳದಿಂಗಳ ವಿಸ್ತಾರವಾದ ಆಳತೆಯನ್ನು ಯಾರು ತಿಳಿಯಲು ಸಾಧ್ಯ? ಆ ಬೆಳದಿಂಗಳಿನ ಒಂದಂಶದ ಪ್ರಸಾರದಿಂದ ನನ್ನ ಬುದ್ಧಿಯು ಈ ಸ್ತುತಿಯನ್ನು ಬರೆಯಲು ಲೇಖನಿಯೇ ಆಯಿತು!!

ಭಾತ್ರಾಗ್ರ್ಯೋ ಭಜತಿ ಜಗತ್ತಲೇ ದ್ವಿಜೋಽನ್ಯ
ಆಚಾರ್ಯಂ ಯದುಪುರನಾಥನಾಮಧೇಯಃ ॥
ಯೋ ಲೇಭೇ ನಿಜಗುರುವರ್ಯಷಷ್ಟಿಪೂರ್ತೌ
ಶ್ರೀಸೌಧಾನುವದನತೋ ನಿಜೇಷ್ಟಪೂರ್ತಿಮ್ ॥ ೮೩ ॥

ಆ ಆಚಾರ್ಯರನ್ನು ದ್ವಾರಕನಾಥಾಚಾರ್ಯರೆಂಬ ಮತ್ತೊಬ್ಬ ಶ್ರೇಷ್ಠ ಶಿಷ್ಯರಾದ ಬ್ರಾಹ್ಮಣರು ಸೇವೆ ಮಾಡುತ್ತಿದ್ದಾರೆ. ಅವರು ತಮ್ಮ ಗುರುವರ್ಯರ ಷಷ್ಟಿ ಪೂರ್ತಿ (ಅರವತ್ತನೇ ವರ್ಷದ ಶಾಂತಿ) ಮಹೋತ್ಸವದಲ್ಲಿ ಶ್ರೀ ನ್ಯಾಯಸುಧಾನುವಾದದಿಂದ ತಮ್ಮ ಇಷ್ಟ ಪೂರ್ತಿಯನ್ನು ಪಡೆದಿದ್ದರು.

ಶಿಷ್ಯಾನೇಷ ಶಶಾಸ ಶುಭ್ರಯಶಸಃ ಕುರ್ಯಾತ ನೋ ವಿದ್ಯಯಾ
ಯೂಯಂ ಜೀವನಮಿತ್ಯಮುಷ್ಯ ಶಿರಸಾಽಽದೇಶಶ್ಚ ಶಿಷ್ಯೈರ್ಧೃತಃ ॥
ಮನ್ಯೇ ತಾನಶಿಷತ್ತಥಾ ಸ ಧನತಾಂ ವಿದ್ಯಾಗತಾಂ ರಕ್ಷಿತುಂ
ವಿದ್ಯಾಯಾಃ ಕ್ರಯಣೇ ಕಥಂ ನು ಧನತಾ ವರ್ತೇತ ಚಿಂತಾಂ ಕುರು ॥ ೮೭ ॥

ಶ್ರೀ ಆಚಾರ್ಯರು ಸ್ವಚ್ಛ ಕೀರ್ತಿವಂತರಾದ ತಮ್ಮ ಶಿಷ್ಯರಿಗೆ 'ನೀವು ವಿದ್ಯೆಯಿಂದ ಜೀವನ ನಡೆಸಕೂಡದು' ಎಂದು ಶಾಸನೆ ಮಾಡಿದರು. ಆ ಆದೇಶವನ್ನು ಶಿಷ್ಯರು ಶಿರಸಾ ಧರಿಸಿ ಗೌರವಿಸಿದರು. (ಆಚಾರ್ಯರ ಶಿಷ್ಯರೆಲ್ಲರೂ ವಿದ್ಯೆಯನ್ನು ಸಂಪಾದನೆಗಾಗಿ ಉಪಯೋಗಿಸಲಿಲ್ಲ, ಹರಿಪ್ರೀತಿಗೆ ಸಾಧನವಾಗಿಸಿಕೊಂಡರೆಂದು ಭಾವ). ಆಚಾರ್ಯರು ಶಿಷ್ಯರಿಗೆ ಹಾಗೆ ಏಕೆ ಆದೇಶಿಸಿದರು ? ಎಂದರೆ - ವಿದ್ಯೆಯಲ್ಲಿರುವ ಧನತ್ವವನ್ನು ಕಾಪಾಡಲು ಹಾಗೆ ಆದೇಶಿಸಿದರೆಂದು ನಾನು ಊಹಿಸುತ್ತೇನೆ. ಏಕೆಂದರೆ ವಿದ್ಯೆಯನ್ನು ಜೀವನಕ್ಕಾಗಿ ಮಾರಿದರೆ ಅದು ಧನವು ಹೇಗಾಗುತ್ತದೆ ? ವಿಚಾರ ಮಾಡು. (ಅಂದರೆ 'ವಿದ್ಯಾಧನಂ ಸರ್ವಧನಪ್ರಧಾನಂ' ಎಂದು ವಿದ್ಯೆಯನ್ನು ಧನವೆಂದು ಗೌರವಿಸಿದ್ದಾರೆ. ನಾವೀಗ ಧನಕ್ಕಾಗಿ ವಿದ್ಯೆಯನ್ನು ಮಾರಿದರೆ ಕ್ರಯಕ್ಕೆ ಒಳಪಡುವುದರಿಂದ ವಿದ್ಯೆಯು 'ಅಕ್ಕಿ - ಬೇಳೆ' ಮೊದಲಾದವುಗಳಂತೆ ಒಂದು ವಸ್ತುವಾಗುತ್ತದೆ. ಹೊರತು ಧನವಾಗಲಾರದು ಎಂದು ಭಾವ).

ಸ್ಯಾತ್ಕೇಷಾಂಚಿದಹಾದ್ಯ ಶಿಷ್ಯಶತಕಂ ಕಿಂ ತೇನ ಯತ್ರ ಸ್ಥಿತ
ಏಕೋಽಂತೇನಿವಸಂಶ್ಚ ವೇದವಿಹಿತೇ ಕೃತ್ಯೇ ನ ದೀಕ್ಷಾಯುತಃ ॥
ಶಿಷ್ಯಾಸ್ತಸ್ಯ ತು ನೈಜಧರ್ಮನಿರತಾ ಯೇಽನ್ಯಾಂಸ್ತಥಾ ಕುರ್ವತೇ
ತೇಷ್ವೇಕಸ್ಯ ತುಲಾಂ ನ ಯಾತಿ ಶತಕಂ ವಾಚಾಮಾತ್ರಪೌರುಷ್ಯಕಮ್ ॥ ೮೮ ॥

ಇಂದು ಕೆಲವರಿಗೆ ನೂರಾರು ಜನ ಶಿಷ್ಯರಿರಬಹುದು. ಆದರೆ ಅವರಲ್ಲಿರುವ ಒಬ್ಬ ಶಿಷ್ಯನೂ ಸಹ ವೇದ ವೈದಿಕ ಆಚಾರದಲ್ಲಿ ದೀಕ್ಷೆಯಿಲ್ಲದವನಾದ್ದರಿಂದ ಅವರಿಂದ ಪ್ರಯೋಜನವೇನಿದೆ ? ಆ ಆಚಾರ್ಯರ ಶಿಷ್ಯರಾದರೋ ತಮ್ಮ ವಿಹಿತ ಧರ್ಮದಲ್ಲಿ ನಿರತರಾಗಿದ್ದಾರೆ. ಅಲ್ಲದೇ ಇತರರನ್ನೂ ಧರ್ಮಿಷ್ಠರನ್ನಾಗಿ ಮಾಡುತ್ತಿದ್ದಾರೆ. ಆದ್ದರಿಂದ ಈ ನೂರುಶಿಷ್ಯರು ಆ ಆಚಾರ್ಯರ ಒಬ್ಬ ಶಿಷ್ಯನಿಗೂ ಸಮರಾಗಲಾರು. ಏಕೆಂದರೇ : - ಇವರಲ್ಲಿ ಮಾತಿನಲ್ಲಿ ಮಾತ್ರ ಪೌರುಷ್ಯವಡಗಿದೆ. ಆದರೆ ಮಾತಿಗಿಂತ ಕೃತಿಯು ಲೇಸಲ್ಲವೇ.

ಯೇಷಾಂ ಮಾಧ್ವಪಥೇಽಭವಚ್ಛುಭಗತಿಸ್ತಚ್ಚಾರುವಾಕ್ಚರ್ಯಯಾ
ತತ್ಸರ್ವಂ ಭುವನಂ ಸದೈವ ಖಲು ತಚ್ಛಿಷ್ಯತ್ವಭೂತ್ಯಾಶ್ರಯಃ ॥
ಯಸ್ಮಿನ್ ಶೇಷಗಿರೀಶವರ್ಯನೃಹರೀ ವಿಪ್ರೋತ್ತಮೌ ಭೂತಲೇ
ಕೀನಾಶೋತ್ತರದಿಗ್ಧವಧ್ರುವನಿಭೌ ಸತ್ಸಂಸ್ತುತೌ ಲೌಕಿಕೇ ॥ ೮೯ ॥

ಆ ಆಚಾರ್ಯರ ಸುಂದರವಾದ ವಾಗ್ವ್ಯಾಪಾರದಿಂದ ಯಾರು ಮಧ್ವಶಾಸ್ತ್ರದ ಮಾರ್ಗದಲ್ಲಿ ಗಮನಹೊಂದಿದರೋ ಅಂತಹ ಎಲ್ಲ ಜಗತ್ತು ಯಾವಾಗಲೂ ಆ ಆಚಾರ್ಯರ ಶಿಷ್ಯತ್ವವೆಂಬ ಐಶ್ವರ್ಯಕ್ಕೆ ಪಾತ್ರವೇ ಆಗುತ್ತದೆ. ಇಂತಹ ಈ ಲೌಕಿಕ ಶಿಷ್ಯಜಗತ್ತಿಗೆ ಕೊಯಮುತ್ತೂರು ಶೇಷಗಿರೀಶಾಚಾರ್ಯರು ಹಾಗು ಧಾರವಾಡದ ಹುದ್ದಾರ ನರಸಿಂಗರಾಯರು ದಕ್ಷಿಣ ಧ್ರುವ ಉತ್ತರ ಧ್ರುವಗಳಂತೆ ಆಧಾರವಾಗಿರುವರೆಂದು ಸಜ್ಜನರೆಲ್ಲ ಕೊಂಡಾಡುತ್ತಾರೆ.

ಯದ್ದಿವ್ಯಸ್ವನಶೋಭಿತಪ್ರವಚನಪ್ರೋತ್ಥೋಗ್ರಸಂಶಾಸನಾತ್
ಶಿಷ್ಯತ್ವಂ ಜಗತಾಖಿಲೇನ ಸಮಿತಂ ಸನ್ಮಾರ್ಗದೀಕ್ಷಾವತಾ ॥
ತಸ್ಯಾರ್ಯಪ್ರವರಸ್ಯ ಚ ಪ್ರವಚನಂ ಪೀಯೂಷಭಾಭಾಜನಂ
ಗಣ್ಯಾನ್ಯಾತುಲಪುಣ್ಯಪೂರ್ಣಜನತಾಕರ್ಣೈಕಲಭ್ಯಂ ಭುವಿ ॥ ೯೦ ॥

ದೇವವಾಣಿಯಿಂದ ಕಂಗೊಳಿಸುವ ಪ್ರವಚನದಲ್ಲಿ ಉಂಟಾದ ಸ್ಥಿರವಾದ ಯಾರ ಪ್ರಶಾಸನೆಯಿಂದ ಎಲ್ಲ ಜಗತ್ತು ಸನ್ಮಾರ್ಗದಲ್ಲಿ ದೀಕ್ಷೆವುಳ್ಳದ್ದಾಗಿ ಶಿಷ್ಯತ್ವವನ್ನು ಪಡೆದಿತ್ತೋ, ( शासनात् शिष्य उच्यते ) ಅಂತಹ ಪೂಜ್ಯ ಆಚಾರ್ಯರ ಪ್ರವಚನವು ಅಮೃತದ ಕಾಂತಿಗೆ ನೆಲೆ. ಎಣಿಸಲಾಗದಷ್ಟು ಪುಣ್ಯದಿಂದ ತುಂಬಿರುವ ಜನತೆಯ ಕಿವಿಗಳಿಗೆ ಮಾತ್ರ ಜಗತ್ತಿನಲ್ಲಿ ಲಭ್ಯವಾದುದು.

ಮಾತ್ಸರ್ಯೇಣ ಜಿಗೀಷಯಾ ವಿಮಲಯಾ ಭಕ್ತ್ಯಾಥ ವಿತ್ತೀಪ್ಸಯಾ
ವಕ್ತೃಶ್ರೋತೃವಿಮರ್ಶಕಾದಿಜನತಾ ಪ್ರಾಪ್ತಾಖಿಲಾಽಽಶಂಕಿತಾ ॥
ಯಸ್ಯೋಪನ್ಯಸನಂ ಶೃಣೋತಿ ವದನೈಃ ಕರ್ಣೈರುತೇತೀಕ್ಷಕೈಃ
ಬಾಹ್ಯೈಸ್ತನ್ಮಧುರಸ್ವನಪ್ರವಚನಂ ಕಃ ಪೂರ್ಣಮಾವರ್ಣಯೇತ್ ॥ ೯೧ ॥

ಮಾತ್ಸರ್ಯದಿಂದ, ಗೆಲ್ಲಬೇಕೆಂಬ ಬಯಕೆಯಿಂದ, ಹಾಗೆಯೇ ನಿರ್ಮಲ ಭಕ್ತಿಯಿಂದ, ತಿಳಿಯಬೇಕೆಂಬ ಹಂಬಲದಿಂದ - ಹೀಗೆ ಅನೇಕ ದೃಷ್ಟಿಯಿಂದ ಉಪನ್ಯಾಸಕ್ಕೆ ಜನತೆಯು ನೆರೆಯುತ್ತಿತ್ತು. ಅಲ್ಲಿ ಸ್ವತಃ ಉಪನ್ಯಾಸಕರಾದಂತಹವರು ಹಾಗೂ ಕೇವಲ ಶ್ರೋತೃಗಳಾದಂತಹವರು ಅಲ್ಲದೇ ವಿಮರ್ಶಕರಾದ ವ್ಯಕ್ತಿಗಳೆಲ್ಲರೂ ಇರುತ್ತಿದ್ದರು. ಇಂತಹ ಈ ಜನತೆಯನ್ನು ಹೊರಗಿನಿಂದ ನೋಡುವವರು 'ಇವರು ಉಪನ್ಯಾಸವನ್ನು ಬಾಯಿಂದ ಕೇಳುತ್ತಿದ್ದಾರೋ ಅಥವಾ ಕಿವಿಗಳಿಂದಲೋ!' ಎಂದು ಸಂದೇಹ ಪಡುತ್ತಿದ್ದರು. (ಅಂದರೆ ಜನರೆಲ್ಲ ಬಾಯ ತೆರೆದು ಪ್ರವಚನ ಕೇಳುವುದರಲ್ಲಿ ಮಗ್ನರಾಗುತ್ತಿದ್ದರು) ಹೀಗೆ ಆಕರ್ಷಕವಾದ, ಆ ಆಚಾರ್ಯರ ಮಧುರ ಧ್ವನಿಯಿಂದ ಅದ್ಭುತವಾದ ಪ್ರವಚನವನ್ನು ಯಾರು ಪರಿಪೂರ್ಣ ವರ್ಣಿಸಲು ಸಮರ್ಥರಾಗುತ್ತಾರೆ?

ಪೂರ್ವೇದ್ಯುಃಶ್ರುತಸುಂದರಪ್ರವಚನಸ್ತುತ್ಯಾದಿನಾನಾಸ್ವನೇ
ತತ್ರಸ್ಥೇ ಜನಸಾಗರೇ ವಿಶತಿ ಸತ್ಯಾರ್ಯೇಽನುಭೂತಾಽದ್ಭುತಾ ॥

ತದ್ವಾಕ್ಯಾಮೃತಪಾನಕಾತರಜನೈಸ್ಸರ್ವತ್ರ ನಿಶ್ಶಬ್ದತಾ
ತದ್ವೀಕ್ಷಾಸರಿದಂತರಸ್ಥಿತಿಬಲಾದ್ಬಾಲೈರಪಿ ವ್ಯಾಪೃತಾ || ೯೨ ||

ಹಿಂದಿನ ದಿನದಲ್ಲಿ ಕೇಳಿದ ಸುಂದರವಾದ ಆಚಾರ್ಯರ ಪ್ರವಚನವನ್ನು ಕೊಂಡಾಡುವುದೇ ಮೊದಲಾದ ಅನೇಕ ರೀತಿಯ ಧ್ವನಿಗೈಯ್ಯುತ್ತ ಅಲ್ಲಿ ನೆರೆದಿರುವ ಜನ ಸಮುದ್ರದಲ್ಲಿ ಶ್ರೀ ಆಚಾರ್ಯರು ಪ್ರವೇಶಿಸಿದಾಗ ಆಚಾರ್ಯರ ವಾಗಮೃತವನ್ನು ಪಾನಮಾಡಲು ಕಾತರರಾದ ಜನರಷ್ಟೇ ಅಲ್ಲದೇ ಹುಡುಗರೂ ಸಹ ಆ ಆಚಾರ್ಯರ ನೋಟವೆಂಬ ನದಿಯೊಳಗೆ ಮುಳುಗಿದವರಾಗಿ ಎಲ್ಲೆಡೆ ಹರಡಿದಂತಹ ನಿಶ್ಶಬ್ದತೆಯನ್ನು ಅನುಭವಿಸುತ್ತಿದ್ದರು (ನದಿಯಲ್ಲಿ ಮುಳುಗಿದಾಗ ಶಬ್ದವು ಕೇಳುವುದಿಲ್ಲ, ಎಲ್ಲವೂ ನಿಶ್ಶಬ್ದವಷ್ಟೆ).

ರಾಗಾಲಾಪವಿಲಾಸಶಾಲಿಮಧುರಾರ್ಥಾಪಾದಮೌಳ್ಯಾಭಿಧ -
ಶ್ಲೋಕೇನ ಸ್ತವನಂ ಗುರೋರ್ಬುಧವರೇ ಭಕ್ತ್ಯಾ ದಧತ್ಯಾದಿತಃ ||
ಬಾಲಾಶ್ಚಿತ್ರಕಥಾಶ್ಚ ತತ್ವಮಬಲಾಸ್ತತ್ರ ಸ್ಥಿತಂ ಪೂರುಷಾ
ಧೀರಾ ದುರ್ಮತನಾಶಮಿತ್ಥಮಖಿಲಾಃ ಕಾಂಕ್ಷಂತ ಐಕ್ಷಂತ ತಮ್ || ೯೩ ||

ಜ್ಞಾನಿವರೇಣ್ಯರಾದ ಶ್ರೀ ಆಚಾರ್ಯರು ಪ್ರವಚನದ ಪೂರ್ವದಲ್ಲಿ ರಾಗಗಳ ಆಲಾಪನೆಯ ವಿಲಾಸಮಯವಾದ, ಸುಂದರ ಅರ್ಥಗರ್ಭಿತವಾದ 'ಆಪಾದ ಮೌಲಿ' ಎಂಬ ಶ್ಲೋಕದಿಂದ ಗುರುಸ್ತುತಿಯನ್ನು ಆಚರಿಸುತ್ತಿದ್ದಂತೆ, ಆಗ ಅಲ್ಲಿದ್ದ ಬಾಲಕರು ಅದ್ಭುತವಾದ ಕಥೆಗಳನ್ನು, ಸ್ತ್ರೀಯರು ಹಾಗು ಪುರುಷರು ಆ ಕಥೆಯಲ್ಲಡಗಿರುವ ತತ್ತ್ವವನ್ನು, ಮತ್ತೆ ಬುದ್ಧಿಯಿಂದ ವಿಹರಿಸುವ ವ್ಯಕ್ತಿಗಳು ಆ ತತ್ವದಿಂದಾಗುವ ದುರ್ಮತಖಂಡನೆಯನ್ನು, ಹೀಗೆ ಎಲ್ಲ ಜನರು ಒಂದೊಂದು ಫಲವನ್ನು ಅಪೇಕ್ಷಿಸುತ್ತ ಆಚಾರ್ಯರನ್ನು ನಿರೀಕ್ಷಿಸುತ್ತಿದ್ದರು.

ತತ್ರಾದೌ ವಿಬುಧೇನ ತೇನ ರಚಿತಾ ವ್ಯಾಖ್ಯಾದ್ಭುತಾ ಭೂಮಿಕಾ
ಸದ್ವಿದ್ಯಾಬದರೇಚ್ಛುಪಕ್ಷಿವಸತೇಃ ಪಾರಾಶರಕ್ಷೇತ್ರವತ್ ||
ಭಕ್ತಿಸ್ತ್ರೀಪ್ರಿಯಕೃಷ್ಣಪಾದವಿಹೃತೇರ್ವೃಂದಾವನಕ್ಷೇತ್ರವತ್
ದುರ್ವಾಕ್ಕೌರವಹಾರಿಘೋರಸಮಿತೇರ್ಜಾತಾ ಕುರುಕ್ಷೇತ್ರವತ್ || ೯೪ ||

ಜ್ಞಾನಿಗಳಾದ ಶ್ರೀ ಆಚಾರ್ಯರು ಪ್ರವಚನದಲ್ಲಿ ಮೊದಲನೇಯದಾಗಿ ರಚಿಸುತ್ತಿದ್ದ ವಿಸ್ತಾರವಾದ ಭೂಮಿಕೆಯು ಅತ್ಯದ್ಭುತವಾಗಿರುತ್ತಿತ್ತು. ಆ ಭೂಮಿಕೆಯು ಒಳ್ಳೆಯ ಜ್ಞಾನವೆಂಬ ಬದರೀ ಫಲವನ್ನು ಅರಸುವ ಒಳ್ಳೆಯ ಪಕ್ಷವುಳ್ಳ ಸಜ್ಜನರೆಂಬ ಪಕ್ಷಿಗಳ ವಾಸಕ್ಕೆ ಶ್ರೀ ವೇದವ್ಯಾಸದೇವರ ಬದರೀ ಕ್ಷೇತ್ರದಂತೆ ಆಗಿತ್ತು. ಹಾಗೆಯೇ ಭಕ್ತಿಯೆಂಬ ಗೋಪಿಕಾಸ್ತ್ರೀಯರಿಗೆ ಪ್ರಿಯನಾದ ಶ್ರೀ

ಕೃಷ್ಣಪರಮಾತ್ಮನ ಪಾದಗಳು ನಲಿದಾಡಲು ವೃಂದಾವನಕ್ಷೇತ್ರದಂತೆ ಆಗಿತ್ತು. ಮತ್ತೆ, ದುರ್ವಾದಿಗಳೆಂಬ ಕೌರವರನ್ನು ಕೊಲ್ಲುವ ಘೋರ ಕದನಕ್ಕೆ ಕುರುಕ್ಷೇತ್ರದಂತೇ ಶೋಭಿಸುತ್ತಿತ್ತು.

**ಯದ್ವಾಣೀಶ್ರವಣೇನ ಮಾರ್ಗಗಮನಂ ತ್ಯಕ್ತ್ವಾಽಥ ಯಂ ಪಶ್ಯತಾಂ**
**ಯೂನಾಂ ನೇತ್ರಪಥೇ ಪ್ರವೇಶರಹಿತಾ ಮಾರ್ಗೇ ಬಹಿಸ್ತಿಷ್ಠತಾಮ್ ॥**
**ಮಂಜೀರಾದ್ಭುತಶಿಂಜಿತೋಹ್ಯಯುವತೀಪಾದಾಗತೇಃ ಪದ್ಧತಿಃ**
**ತದ್ವಾಕ್ಪದ್ಧತಿರಾಸ್ತ ಧರ್ಮಕಥನೇ ಭೈಮೀವ ತೀಕ್ಷ್ಣಾ ಸದಾ ॥ ೯೫ ॥**

ಶ್ರೀ ಆಚಾರ್ಯರು ಪ್ರವಚನ ಮಾಡುತ್ತಿರುವಾಗ ಅವರ ದಿವ್ಯವಾಣಿಯನ್ನು ಕೇಳಿ ದಾರಿಯಲ್ಲಿ ನಡೆಯುತ್ತಿದ್ದ ಯುವಕರೂ ಸಹ ಅಲ್ಲಿಯೇ ಹೊರವಲಯದಲ್ಲಿ ನಿಲ್ಲುತ್ತಿದ್ದರು. ಆಮೇಲೆ ಶ್ರೀಆಚಾರ್ಯರನ್ನೇ ಏಕಾಗ್ರತೆಯಿಂದ ನೋಡುವುದರಲ್ಲಿ ತಲ್ಲೀನರಾಗುತ್ತಿದ್ದರು. ಆಗ ಗೆಜ್ಜೆಯ ನಾದದಿಂದ ಊಹಿಸಬಹುದಾದ ದಾರಿಯಲ್ಲಿ ನಡೆಯುತ್ತಿರುವ ಯುವತಿಯರ ಹೆಜ್ಜೆಗಳ ಪದ್ಧತಿಯು ಯುವಕರ ಕಣ್ಣಿನ ಹಾದಿಯಲ್ಲೂ ಸಹ ಒಳಹೊಕ್ಕಲಾಗುತ್ತಿರಲಿಲ್ಲ. ಹೀಗೆ ಆ ಆಚಾರ್ಯರ ಪ್ರವಚನ ಪದ್ಧತಿಯು ಅತ್ಯಾಕರ್ಷಕವಾಗಿತ್ತು, ಎಂದ ಮಾತ್ರದಿಂದ ಅಧರ್ಮ ಬೋಧಕವೆಂದೂ ಆಗಿರಲಿಲ್ಲ. ಮತ್ತೆ, ಶ್ರೀಭೀಮಸೇನ ದೇವರ ಮಾತಿನ ರೀತಿಯಂತೆ ನಿಷ್ಠುರವಾಗಿ ಧರ್ಮವನ್ನು ತಿಳಿಸುತ್ತಿತ್ತು.

**ಸೌಧಸ್ಯೋಪರಿ ಸೌಧವತ್ಸ್ವವಿಷಯಂ ವಿಷ್ಣೋಃಪದಾಂತಂ ತದಾ**
**ಸಾಹಿತ್ಯಾದಿಕಲಾಖ್ಯವಿಗ್ರಹಕುಲೈರ್ವಿಸ್ತಾರಯನ್ ಭೂಷಯನ್ ॥**
**ವಿಶ್ವವ್ಯಾಪ್ಯತವಿಶ್ವಕರ್ಮಸದೃಶಃ ಕೀರ್ತ್ಯಾ ಸ ವಿಪ್ರೋತ್ತಮಃ**
**ರೇಜೇ ಭೂಸುರಮಂಡಲೇನ ಮಹಿತಃ ಭೂವಿಶ್ವಕರ್ಮಪ್ರಭುಃ ॥ ೯೬ ॥**

ಕೀರ್ತಿಯಿಂದ ಸೂರ್ಯನಂತೆ ವಿಶ್ವವನ್ನೆಲ್ಲ ವ್ಯಾಪಿಸಿರುವ ಬ್ರಾಹ್ಮಣೋತ್ತಮರಾದ ಶ್ರೀ ಆಚಾರ್ಯರು ಪ್ರವಚನದಲ್ಲಿ ತಾವು ಪರಿಗ್ರಹಿಸಿದ ವಿಷಯವನ್ನು, ಮಹಡಿಯ ಮೇಲೆ ಮಹಡಿಗಳನ್ನೆಂಬಂತೆ ಭಗವಂತನ ಪಾದಗಳೆಂಬ ಆಕಾಶದವರೆಗೆ ಬೆಳೆಸುತ್ತಿದ್ದರು. ಆ ಮಹಡಿಗಳನ್ನು ಸಾಹಿತ್ಯ ಮೊದಲಾದ ಕಲೆಗಳೆಂಬ ವಿಗ್ರಹಗಳಿಂದ ಅಲಂಕರಿಸುತ್ತಿದ್ದರು. ಆಗ ಶ್ರೀ ಆಚಾರ್ಯರು ಭೂಮಿಯ ದೇವತೆಗಳ (ಬ್ರಾಹ್ಮಣರ) ಮಂಡಲದಲ್ಲಿ ಭೂಮಿಯ ವಿಶ್ವಕರ್ಮಾಚಾರ್ಯರಂತೆ ಗೌರವಿಸಲ್ಪಡುತ್ತ ವಿರಾಜಿಸುತ್ತಿದ್ದರು.

**ಸ್ತೋಕಾರ್ಥೇಽಗಣಿತಪ್ರಮಾಣಗಣತಸ್ಸಾಧುತ್ವಸಂಸಾಧಕಂ**
**ಆಕ್ಷೇಪೋತ್ತರರೂಪದುಃಖಸುಖಯೋರೂಹ್ಯಾನ್ಯಯೋಃ ಕಾರಣಮ್ ॥**
**ಸಂತೋ ವೀಕ್ಷ್ಯ ಯಶೋದ್ರಿಶೃಂಗನಿಲಯಂ ತಂ ಶ್ರೀನಿವಾಸಂ ಸದಾ**
**ಸಂಸಾರೇ ಸುಖದುಃಖಹೇತುಮವಿದುಃ ಶ್ರೀಶ್ರೀನಿವಾಸಂ ನ ಕಿಮ್ ॥ ೯೭ ॥**

ತಾವು ವರ್ಣಿಸಿದ ವಿಷಯವನ್ನು ಅನೇಕ ಪ್ರಮಾಣಗಳ ಆಧಾರದಿಂದ ಸರಿಯಾದುದೆಂದು ಸಮರ್ಥಿಸುತ್ತ, ಊಹೆಗೂ ನಿಲುಕದಂತಹ ಆಕ್ಷೇಪ ಉತ್ತರಗಳೆಂಬ ದುಃಖ - ಸುಖಗಳನ್ನು ನೀಡುವ, ಕೀರ್ತಿಯ ಪರ್ವತದ ಉತ್ತುಂಗದಲ್ಲಿರುವ ಆ ಶ್ರೀನಿವಾಸಾಚಾರ್ಯರನ್ನು ನೋಡಿದಂತಹ ಸಜ್ಜನರು ಆಗ ಸಂಸಾರದಲ್ಲಿ ಸುಖದುಃಖಗಳಿಗೆ ವೇಂಕಟಪರ್ವತದ ಉತ್ತುಂಗದಲ್ಲಿರುವ ಶ್ರೀ ಶ್ರೀನಿವಾಸದೇವರು ಕಾರಣನೆಂದು ತಿಳಿಯದೇ ಇರುತ್ತಿದ್ದರೇ? (ಈ ಆಕ್ಷೇಪ - ಉತ್ತರಗಳೆಂಬ ಸುಖದುಃಖಾನುಭವದಿಂದ ಸಂಸಾರದಲ್ಲಿ ಸುಖದುಃಖಗಳಿಗೆ ಪರಮಾತ್ಮನೇ ಕಾರಣನೆಂದು ತಿಳಿಯುತ್ತಿದ್ದರು ಎಂದು ಭಾವ).

**ವಿಶ್ವೇಷಾಂ ವಿಶಯಾಶ್ರಯೋಗ್ರವಿಷಯಂ ವೈದುಷ್ಯತಃ ಶೋಧಯನ್**
**ನಾನಾಮಾನಪುರಸ್ಸರಂ ಬುಧವರಸ್ಸಂವರ್ಣಯನ್ ಲೀಲಯಾ ॥**
**ತೇಷಾಂ ಸಂಶಯನಾಶಮಾಶು ಸುದೃಶಾ ವಿಶ್ವಜ್ಞವಾಚಾ ದಧತ್**
**ಕಿಂ ಜಾತೋ ವಿಶಯೋ ನ ವೇತಿ ವಿಶಯಂ ಚಕ್ರೇ ಸವಿಶ್ವಾಶ್ರಯಮ್ ॥ ೯೮ ॥**

ಜ್ಞಾನಿವರ್ಯರಾದ ಶ್ರೀ ಆಚಾರ್ಯರು ಎಲ್ಲ ಜನರ ಸಂಶಯಕ್ಕೆ ಆಸ್ಪದವಾಗಿದ್ದ ಕಠಿಣ ವಿಷಯವನ್ನು ತಮ್ಮ ವೈದುಷ್ಯದಿಂದ ತಿಳಿಗೊಳಿಸಿ, ಅನೇಕ ಪ್ರಮಾಣಪುರಸ್ಸರವಾಗಿ ಸುಲಭವಾಗಿ ವರ್ಣಿಸಿ, ಶ್ರೀ ಪೂರ್ಣಪ್ರಜ್ಞಾಚಾರ್ಯರ ವಾಕ್ಯಗಳಿಂದ ಒಳ್ಳೆಯ ಜ್ಞಾನವನ್ನು ನೀಡುತ್ತ, ಅವರ ಸಂಶಯಗಳನ್ನು ಶೀಘ್ರವಾಗಿ ನಾಶಗೊಳಿಸಿದಾಗ, ಎಲ್ಲ ಜನರಿಗೆ "ನಮಗಿಲ್ಲಿ ಸಂಶಯವು ಹುಟ್ಟಿತ್ತೋ ಅಥವಾ ಇಲ್ಲವೋ?" ಎಂಬ ಸಂಶಯವು ಮಾತ್ರ ಇರುತ್ತಿತ್ತು.

**ಅದ್ವೈತಾದಿಕುವಾದವೇದ್ಯವಿಷಯಃ ತೀಕ್ಷ್ಣಂ ವಿಷಂ ಕೇವಲಂ**
**ಪೀಯೂಷಂ ದಶಧೀಪ್ರದರ್ಶ್ಯವಿಷಯಃ ನಿತ್ಯಾಮೃತತ್ವಪ್ರದಃ ॥**
**ಆರ್ಯೇ ಬೋಧಯತೀತಿ ದುರ್ಮತವಿಷಂ ಕಾಂಕ್ಷೇದ್ದ್ವಿಜಃ ಕೋ ನು ತಂ**
**ಯಸ್ಮಾದಾಶು ವಿನಾಶಮೇತ್ಯಮರತಾ ವಿಪ್ರಸ್ಥಿತಾ ಭೂತಲೇ ॥ ೯೯ ॥**

"ಅದ್ವೈತವೇ ಮೊದಲಾದ ದುರ್ವಾದಗಳು ತಿಳಿಸುವ ವಿಷಯಗಳು ಕೇವಲ ಕಠೋರ ವಿಷವೇ ಹೊರತು, ಬೇರೆ ಏನೂ ಅಲ್ಲ. ನಿತ್ಯ ಅಮರತ್ವವನ್ನು (ಮೋಕ್ಷವನ್ನು) ನೀಡುವ ಅಮೃತವೆಂದರೇ - ಶ್ರೀಮದಾಚಾರ್ಯರು ತೋರಿಸಿದ ಪ್ರಮೇಯಗಳು" ಹೀಗೆ ಶ್ರೀ ಆಚಾರ್ಯರು ಬೋಧನೆಮಾಡಿದಾಗ ದುರ್ವಾದವೆಂಬ ವಿಷವನ್ನು ಯಾವ ಬ್ರಾಹ್ಮಣ ಬಯಸುವನಾಗುತ್ತಾನೆ? ಏಕೆಂದರೇ ಆ ವಿಷದಿಂದ ಬ್ರಾಹ್ಮಣರಲ್ಲಿರುವ ಅನಿತ್ಯವಾದ ಭೂಮಿಯ ಅಮರತ್ವವೂ (ಬ್ರಾಹ್ಮಣ್ಯ) ನಶಿಸಿ ಹೋಗುತ್ತದೆ. (ಅಂದ ಮೇಲೆ ನಿತ್ಯವಾದ ಅಮರತ್ವವು (ಮೋಕ್ಷ) ಅದರಿಂದ ಹೇಗೆ ಸಿದ್ಧಿಸುತ್ತದೆ?)

ಯಾ ಜಾತಾ ಜನತಾಂತರೇ ಮೃದುತರೇ ದೀಕ್ಷಾ ತು ತತ್ರಾಕ್ಷಯಾ
ಸಿದ್ಧಾಂತೇ ಪ್ರಚುರಾಂತರೇಣ ವಿವೃತೇ ತದ್ಧೀಮದುಕ್ತೇಸ್ತದಾ ॥
ಮೋಹಾಹಾರ್ಯವಿಹಾರಸಂಹೃತಿಕೃತೌ ಚಾತುರ್ಯವತ್ಯಾಃ ಪುರಃ
ದಾರ್ಢ್ಯೇಸ್ಯಾಶ್ಚ ಬಿಡೌಜಸೋಽತಿಸುದೃಢಂ ವಜ್ರಂ ಚ ತೂಲಾಯತೇ ॥ ೧೦೦ ॥

ಧೀಮಂತರಾದ ಶ್ರೀ ಆಚಾರ್ಯರ ಪ್ರವಚನದಿಂದ ಆಗ ಅಲ್ಲಿರುವ ಮೃದು ಸ್ವಭಾವದ ಜನರಲ್ಲಿ ಶ್ರೀಮದಾಚಾರ್ಯರ ಸಿದ್ಧಾಂತದ ಬಗ್ಗೆ ಹುಟ್ಟಿದ ದೀಕ್ಷೆಯು ಅಕ್ಷಯವೂ ಸುದೃಢವೂ ಆಗಿರುತ್ತಿತ್ತು. ಮೋಹವೆಂಬ ಬೆಟ್ಟಗಳ ಆಟವನ್ನು ಕುಟ್ಟಿ ಕೊಲ್ಲುವುದರಲ್ಲಿ ಚತುರವಾದ ಆ ದೀಕ್ಷೆಯ ಎದುರು, ಧಾರ್ಢ್ಯತೆಯಲ್ಲಿ, ಇಂದ್ರನ ಸುದೃಢ ವಜ್ರಾಯುಧವೂ ಹತ್ತಿಯಂತೆ ಮೆತ್ತನೆಯ ವಸ್ತುವೇ ಸರಿ.

ಅಜ್ಞಾನಾಮಯಪೀಡನೇನ ಬಹುಲಂ ಗ್ಲಾನಾನನಾನ್ ಸಜ್ಜನಾನ್
ನೈಷ್ಠುರ್ಯಾಸಹತತ್ವಜಾಯುಭಜನೇ ಬಾಲೌಘವಚ್ಚಂಚಲಾನ್ ॥
ಮಾತೇವಾಯಮುಪಾಯಯತ್ಕರುಣಯಾ ವಿಪ್ರಃ ಪ್ರಮಾತಾ ತದಾ
ನಿಕ್ಷಿಪ್ಯಾತಿವಿಚಿತ್ರಚಾರುಚರಿತಕ್ಷೌದ್ರೇ ಚ ತತ್ವೌಷಧಮ್ ॥ ೧೦೧ ॥

ಅಜ್ಞಾನವೆಂಬ ರೋಗದ ಪೀಡೆಯಿಂದ ಬಹಳವಾಗಿ ಬಳಲಿಹೋದ ವದನವುಳ್ಳ ಸಜ್ಜನರು ನಿಷ್ಠುರತೆಯಿಂದ ಅಸಹ್ಯವಾದ ತತ್ವಗಳೆಂಬ ಔಷಧಿಯನ್ನು ಸೇವಿಸಲು ಹುಡುಗರಂತೆ ಚಂಚಲರಾಗಿದ್ದಾಗ, ಮಾತೆಯು ಮಕ್ಕಳಿಗೆ ಜೇನು ತುಪ್ಪದಲ್ಲಿ ಔಷಧಿಯನ್ನು ಬೆರಸಿ ಕುಡಿಸುವಂತೆ, 'ಪ್ರಮಾತಾ'(ಪ್ರಮಾಣಾಭಿಜ್ಞ) ಆಗಿರುವ ವಿಪ್ರೋತ್ತಮರಾದ ಶ್ರೀ ಆಚಾರ್ಯರು ಅತ್ಯದ್ಭುತವಾದ ರಮಣೀಯವಾದ ಚರಿತ್ರೆಗಳೆಂಬ ಜೇನುತುಪ್ಪದಲ್ಲಿ ತತ್ವಗಳೆಂಬ ಔಷಧಿಯನ್ನು ಸೇರಿಸಿ ಕುಡಿಸುತ್ತಿದ್ದರು. (ಹೀಗೆ ಆಚಾರ್ಯರ ತತ್ವೋಪದೇಶವು ಮನಮುಟ್ಟುವಂತೆಯೂ ನಿಷ್ಠುರವಾಗಿಯೂ ಇರುತ್ತಿತ್ತೆಂದು ಭಾವ).

ತತ್ಕಾಲೀನಮಯಂ ಪ್ರಸಿದ್ಧವಿಷಯಂ ಗೃಹ್ಣನ್ ಕಥಾಂ ವರ್ಣಯನ್
ವಕ್ತಿ ಸ್ಮಾಖಿಲಕಾಲಸಿದ್ಧಮತುಲಂ ತತ್ವಾಮೃತಂ ಕೇವಲಂ ॥
ತತ್ಕಾಲೀನಜನಾ ಇವಾಜ್ಞಸುಖದಂ ತತ್ಕಾಲತತ್ವಾನೃತಂ
ತತ್ಕಾಲೀನಬುಧೋಽಪಿ ನೋಚ ಇತಿ ಕಿಂ ತೇಷಾಂ ಸ ಕಾಲೋಽಭವತ್ ॥ ೧೦೨ ॥

ಶ್ರೀ ಆಚಾರ್ಯರು ಪ್ರವಚನದಲ್ಲಿ ತತ್ಕಾಲೀನವಾದ ಒಂದು ಪ್ರಸಿದ್ಧ ಸುದ್ದಿಯನ್ನು ತೆಗೆದುಕೊಂಡು ಕಥೆಯನ್ನು ಸುಂದರವಾಗಿ ವರ್ಣಿಸುತ್ತಿದ್ದರೂ ಸಹ ಸಾರ್ವಕಾಲಿಕವಾದ ಅಸದೃಶ ತತ್ವಗಳೆಂಬ ಅಮೃತವನ್ನು ಮಾತ್ರ ತಿಳಿಸುತ್ತಿದ್ದರು. ತತ್ಕಾಲೀನ ಜನರಂತೆ ದಡ್ಡರಿಗೆ ಖುಷಿಕೊಡುವ ತಾತ್ಕಲಿಕ ತತ್ವವೆಂಬ (ಈ ಕಾಲಕ್ಕೆ ಇದುವೇ ಧರ್ಮ. ಅವೆಲ್ಲ ಹಿಂದಿನ ಕಾಲದ ಗೊಡ್ಡು

ಸಂಪ್ರದಾಯವೆಂಬ) ಸುಳ್ಳನ್ನು ತತ್ಕಾಲೀನ ಪಂಡಿತರಾಗಿದ್ದರೂ ಹೇಳುತ್ತಿರಲಿಲ್ಲವಷ್ಟೇ ಅಲ್ಲದೇ, ಅಂತಹ ಸುಳ್ಳು ಹೇಳುವ ಆ ಜನರಿಗೆ ಯಮನಂತೆ ಭಯಂಕರರಾಗಿದ್ದರು.

**ಸೌಂದರ್ಯಾಚಲಭೂಮಿಕಾಭಿಧಭುವಿ ಪ್ರೋದ್ಭೂತನಾನಾಕಥಾ -**
**ವೃಕ್ಷಾಗ್ರಸ್ಥಿತತತ್ವಪುಷ್ಪನಿಕರಂ ದಾಸಾಲಯಃ ಸಂಶ್ರಿತಾಃ ॥**
**ತತ್ಸಾರಂ ಸಮಗೃಹ್ಣತೈವಮಿತಿ ತತ್ಪದ್ಯಾನಿ ಗಾಯನ್ ವದನ್**
**ಸ ವ್ಯಾಸೋಕ್ತಿಪಯಸ್ಸು ದಾಸಸುಪದಕ್ಷೌದ್ರಂ ತದಾಮೇಲಯತ್ ॥ ೧೦೩ ॥**

"ಸೌಂದರ್ಯವೆಂಬ ಪರ್ವತಗಳಿಂದ ಸುಂದರವಾದ - ಭೂಮಿಕೆಯೆಂಬ ಈ ಭೂಮಿಯಲ್ಲಿ, ಹುಟ್ಟಿದ ಅನೇಕ ಚರಿತ್ರೆಗಳೆಂಬ ವೃಕ್ಷಗಳ ತುದಿಯಲ್ಲಿ ಇರುವ ತತ್ವಗಳೆಂಬ ಹೂಗಳ ರಾಶಿಯನ್ನು, ಶ್ರೀ ಪುರಂದರದಾಸರೇ ಮೊದಲಾದ ದಾಸರಾಯರೆಂಬ ದುಂಬಿಗಳು ಆಶ್ರಯಿಸುತ್ತ, ಆ ಹೂವಿನ ಸಾರವಾದ ಜೇನುತುಪ್ಪವನ್ನು ಹೀಗೆ ಸಂಗ್ರಹ ಮಾಡಿದ್ದಾರೆ" ಎಂದು ಹೇಳುತ್ತ ಶ್ರೀ ಆಚಾರ್ಯರು ಆ ದಾಸರಾಯರ ಪದಗಳನ್ನು ಹಾಡುತ್ತ ಹೇಳುತ್ತಿದ್ದರೆ ವ್ಯಾಸಸಾಹಿತ್ಯವೆಂಬ ಹಾಲಿನಲ್ಲಿ ದಾಸಸಾಹಿತ್ಯವೆಂಬ ಜೇನು ಮಿಲನಗೊಳ್ಳುತ್ತಿತ್ತು.

**ಹೃತ್ಪಾತ್ರೇ ಸ ಕಥಾಪಯೋಽಮಿತಸುಹೃದ್ವತ್ಸಾಂ ದುಹನ್ ವ್ಯಾಸಗಾಂ**
**ಕುರ್ವನ್ ಭಕ್ತಿರಸೇನ ತದ್ದಧಿ ಸುಧೀಮಂಥೇನ ಮಥ್ನನ್ ದ್ವಿಧಾ ॥**
**ಆಕ್ಷೇಪೋತ್ತರತಸ್ಸಮುದ್ಧೃತಮಥೋ ಸತ್ತತ್ವನವ್ಯೋದ್ಧೃತಂ**
**ದಾಸೋಕ್ತ್ಯಗ್ನಿರುಚಾ ಮುದಾಜ್ಯಕೃದಭಾತ್ ಸದ್ದೀಪಸಂದೀಪಕಃ ॥ ೧೦೪ ॥**

ಶ್ರೀ ಆಚಾರ್ಯರು, ಅಮಿತ ಪ್ರಮತಿಗಳಾದ ಶ್ರೀ ಮದಾಚಾರ್ಯರೆಂಬ ಕರುವಿನಿಂದ ಕೂಡಿರುವ ಶ್ರೀ ವೇದವ್ಯಾಸದೇವರ ವಾಕ್ಯವೆಂಬ ಕಾಮಧೇನುವಿನಿಂದ ಹೃದಯವೆಂಬ ಪಾತ್ರೆಯಲ್ಲಿ ಕಥೆಗಳೆಂಬ ಹಾಲನ್ನು ಹಿಂಡುತ್ತಿದ್ದರು. ಆ ಹಾಲನ್ನು ಭಕ್ತಿ ರಸದಿಂದ ಬೆರೆಸಿ ಮೊಸರು ಮಾಡುತ್ತಿದ್ದರು. ಆ ಮೊಸರನ್ನು ಒಳ್ಳೆಯ ಬುದ್ಧಿಯೆಂಬ ಕಡಗೋಲಿನಿಂದ ಆಕ್ಷೇಪ - ಉತ್ತರ ಎಂಬ ಕ್ರಮದಿಂದ ಎರಡು ವಿಧವಾಗಿ ಕಡೆಯುತ್ತಿದ್ದರು. ಆಗ ಸತ್ತತ್ವಗಳೆಂಬ ಬೆಣ್ಣೆಯು ಅವಿರ್ಭಾವವನ್ನು ತಾಳುತ್ತಿತ್ತು. ಆ ಬೆಣ್ಣೆಯನ್ನು ಅನಂತರ ದಾಸವರ್ಯರ ಪದಗಳೆಂಬ ಅಗ್ನಿಯ ತೇಜಸ್ಸಿನಿಂದ ತುಪ್ಪವನ್ನಾಗಿಸುತ್ತಿದ್ದರು. ಆ ತುಪ್ಪದಿಂದ ಅಲ್ಲಿ ನೆರೆದಿರುವ ಸಜ್ಜನರೆಂಬುವ ದೀಪಗಳನ್ನು ಉದ್ದೀಪನಗೊಳಿಸುತ್ತಿದ್ದರು. (ಇದು ಶ್ರೀ ಆಚಾರ್ಯರ ಪ್ರವಚನದ ಸಂಪೂರ್ಣ ಚಿತ್ರಣ).

**ಕಲ್ಯಾಣಪ್ರಭೃತಿಪ್ರಸಿದ್ಧವಿವಿಧಶ್ರೋತ್ರೌಘಶರ್ಮಪ್ರದೈ**
**ರಾಗೈರ್ದಾಸವಚಾಂಸಿ ಸುಸ್ವರಮಯಂ ಗಾಯಂಸ್ತದರ್ಥಂ ವದನ್ ॥**

ತಾರಂ ಚಾರುತರಸ್ವರಂ ತದುಪಸಂಹಾರೇ ಸ ಧಾರಾಮರಃ
ಕುರ್ವನ್ ಸರ್ವಹೃದಂತರಿಂದುವದಭೂದ್ಭಕ್ತ್ಯಬ್ಧಿಮುದ್ರೇಚಯನ್ ॥ ೧೦೫ ॥

ಕಲ್ಯಾಣಿ ಮೊದಲಾದ ಪ್ರಸಿದ್ಧವೂ ನಾನಾ ವಿಧವೂ ಶ್ರೋತೃ ಸಮೂಹಕ್ಕೆ ಸಂತೋಷಪ್ರದವೂ ಆದ ರಾಗಗಳಿಂದ ದಾಸರ ಪದಗಳನ್ನು ಸುಸ್ವರವಾಗಿ ಹಾಡುತ್ತ, ಅದರ ಅರ್ಥಗಳನ್ನು ಹೇಳುತ್ತ, ಭೂದೇವತೆಗಳಾದ ಶ್ರೀ ಆಚಾರ್ಯರು ಕೊನೆಯಲ್ಲಿ ತಾರಸ್ವರದಿಂದ ಮನೋಹರವಾಗಿ ಉಪಸಂಹಾರ ಮಾಡುತ್ತಿದ್ದರೆ, ಚಂದ್ರನಿಂದ ಸಮುದ್ರವು ಉಕ್ಕೇರುವಂತೆ ಈ ಆಚಾರ್ಯರೆಂಬ ಚಂದ್ರನಿಂದ ಎಲ್ಲರ ಹೃದಯಾಳದ ಭಕ್ತಿಯೆಂಬ ಕಡಲು ಉಕ್ಕೇರಿ ಹರಿಯುತ್ತಿತ್ತು.

ಸ್ಯಾತ್ಕೇಷಾಂಚನ ಪಾಟವಂ ಪ್ರವಚನೇ ಕಿಂತ್ವತ್ರ ನೋ ವರ್ತತೇ
ನಿರ್ದುಷ್ಟೋ ವಿಷಯೋ ಹಿ ಯತ್ರ ವಿಷಯೋ ನಾಸ್ತ್ಯತ್ರ ತತ್ಪಾಟವಮ್ ॥
ಕಿಂತ್ವಾರ್ಯೇ ದ್ವಯಮದ್ಭುತಂ ಚ ಮಿಲಿತಂ ಗಾನೇನ ಸಾಕಂ ತತಃ
ತಸ್ಯಾಕರ್ಷಕಶರ್ಮದಪ್ರವಚನಂ ಲೋಕೇಽತುಲಂ ಲಕ್ಷ್ಯತೇ ॥ ೧೦೬ ॥

ಕೆಲವರಿಗೆ ಪ್ರವಚನ ಚಾತುರ್ಯ ಚೆನ್ನಾಗಿರಬಹುದು. ಆದರೆ ಅಲ್ಲಿ ವಿಷಯ ನಿರ್ದುಷ್ಟವಾಗಿಲ್ಲ. ಇನ್ನು ವಿಷಯವು ಎಲ್ಲಿ ನಿರ್ದುಷ್ಟವಾಗಿದೆಯೋ ಅವರಲ್ಲಿ ಆ ತರಹದ ಪ್ರವಚನ ಚಾತುರ್ಯವಿಲ್ಲ. ಆದರೆ ಪೂಜ್ಯ ಆಚಾರ್ಯರಲ್ಲಿ ಪ್ರವಚನದ ಚಾತುರ್ಯ ಹಾಗೂ ನಿರ್ದುಷ್ಟ ವಿಷಯ ಇವೆರಡೂ ಅದ್ಭುತವಾಗಿತ್ತು. ಮಿಗಿಲಾಗಿ ಸಂಗೀತದ ಮೇಲನ. ಆದ್ದರಿಂದ ಆಚಾರ್ಯರ ಆಕರ್ಷಕ ಹಾಗೂ ಆನಂದಕರವಾದ ಪ್ರವಚನವೇ ಲೋಕದಲ್ಲಿ ಅಸದೃಶವೆಂದು ಗುರುತಿಸಲ್ಪಡುತ್ತಿದೆ.

ಶ್ರೀಮದ್ಭಾಗವತಾಟವೀಂ ಭವರವೇಸ್ತಾಪಾತಪಂ ಹಾರಿತುಂ
ವಿಷ್ವಾನಾಮಟತಾಂ ಕಥಾಧ್ವನಿ ಸತಾಂ ಶ್ರೀಕೃಷ್ಣಕಲ್ಪದ್ರುಮಮ್ ॥
ಆರ್ಯೋ ದರ್ಶಯತಿ ಶ್ರಿತಾಸ್ತರುಮಿಮಂ ಬಾಲಾಃ ಫಲಂ ಚಾಬಲಾಃ
ಪುಷ್ಪಂ ಪುಷ್ಪರಾಸಾಮೃತಂ ಭುವಿಸುರಾಃ ಪ್ರಾಪ್ತುಂ ಪ್ರಸಾದಾಭಿಧಮ್ ॥ ೧೦೭ ॥

ಸಂಸಾರವೆಂಬ ಸೂರ್ಯನ ತಾಪವನ್ನು ಕಳೆದುಕೊಳ್ಳಲು ಎಲ್ಲರೂ ಶ್ರೀಮದ್ಭಾಗವತವೆಂಬ ವನವನ್ನು ಪ್ರವೇಶಿಸುತ್ತಾರೆ. ಕಥೆಗಳೆಂಬ ಮಾರ್ಗಗಳಲ್ಲಿ ನಡೆದಾಡುತ್ತಾರೆ. ಆದರೆ ಆ ವನದಲ್ಲಿರುವ ಕಲ್ಪವೃಕ್ಷ ಎಲ್ಲರಿಗೂ ದೊರೆಯುವುದಿಲ್ಲ. ಶ್ರೀ ಆಚಾರ್ಯರು ಸಜ್ಜನರಿಗೆ ಮಾತ್ರ ಆ ಕಲ್ಪತರುವನ್ನು ತೋರಿಸುತ್ತಿದ್ದರು. ಆ ಕಲ್ಪತರುವೇ ಶ್ರೀ ಕೃಷ್ಣಪರಮಾತ್ಮ. ಹೀಗೆ ಆಚಾರ್ಯರು ಶ್ರೀ ಕೃಷ್ಣನೆಂಬ ಕಲ್ಪತರುವನ್ನು ತೋರಿಸಿದಾಗ ಬಾಲಕರು ಹಣ್ಣಿನಂತೆ, ಸ್ತ್ರೀಯರು ಹೂವಿನಂತೆ, ಭೂಸುರರು ಅಮೃತದಂತೆ, ಶ್ರೀ ಹರಿಪ್ರಸಾದವನ್ನು ಬಯಸುತ್ತ ಆ ಕಲ್ಪತರುವನ್ನು ಆಶ್ರಯಿಸಿ ಧನ್ಯರಾಗುತ್ತಿದ್ದರು.

ವೈಶಂಪಾಯನವರ್ಣಿತಂ ಸುವಿತತಗ್ರಂಥಂ ಮಹಾಭಾರತಂ
ವೈಶಂಪಾಯನವತ್ಪ್ರವರ್ಣಯತಿ ಭೂದೇವೋತ್ತಮೇಽಸ್ಮಿನ್ ಜನಾಃ ॥
ಶ್ರೋತಾರೋ ದದೃಶುಶ್ಚ ಸಂಜಯ ಇವ ಕ್ಷಿಪ್ರಂ ಹಿ ದಿವ್ಯಾಕ್ಷಿಭಿಃ
ತಸ್ಯಾಸ್ಯಾಭಿಧದರ್ಪಣೇ ಬಹುವಿಧಂ ಯುದ್ಧಾದ್ಯಮದ್ಧಾ ತದಾ ॥ ೧೦೮ ॥

ಶ್ರೀವೈಶಂಪಾಯನರಿಂದ ವರ್ಣಿಸಲ್ಪಟ್ಟ ವಿಸ್ತಾರವಾದ ಮಹಾಭಾರತ ಗ್ರಂಥವನ್ನು ವೈಶಂಪಾಯನರಂತೆ ಈ ಬ್ರಾಹ್ಮಣೋತ್ತಮರಾದ ಶ್ರೀನಿವಾಸಾಚಾರ್ಯರು ವರ್ಣಿಸುವಾಗ ಶ್ರೋತೃಗಳಾದ ಜನರು ಕೂಡಲೇ ಸಂಜಯನಂತೆ ದಿವ್ಯ ಚಕ್ಷುಶಿನಿಂದ ಆ ಆಚಾರ್ಯರ ಮುಖವೆಂಬ ಕನ್ನಡಿಯಲ್ಲಿ ನಾನಾವಿಧವಾದ ಯುದ್ಧಾದಿಲೀಲೆಗಳನ್ನು ಚೆನ್ನಾಗಿ ನೋಡುತ್ತಿದ್ದರು.

ಶ್ರೀರಾಮಾಯಣವರ್ಣನಶ್ರವಣತಃ ಪೂರ್ಣಾ ಜನಾಃ ಶರ್ಮಣಾ
ವಕ್ತಾರಂ ಧರಣೀಸುರಂ ಚ ರುಚಿರಂ ವಿದ್ವದ್ವರಂ ಮೇನಿರೇ ॥
ಆರ್ಯಂ ವಾನರವರ್ಯಮಾರುತಿಕೃಪಾಪೀಯೂಷವರ್ಷಾವೃತಂ
ನೋ ಚೇತ್ತಾದೃಶವರ್ಣನಂ ತು ಧರಣೌ ಕುರ್ಯಾನ್ನು ಕೋ ವಾ ನರಃ ॥೧೦೯॥

ಶ್ರೀ ರಾಮಾಯಣದ ವರ್ಣನೆಯನ್ನು ಶ್ರವಣಮಾಡಿ ಆನಂದದಿಂದ ಪೂರ್ಣರಾದ ಜನರು, ಸುಂದರವಾಗಿ ವರ್ಣಿಸುವ ಭೂಸುರರು ಹಾಗೂ ವಿದ್ವದ್ವರೇಣ್ಯರೂ ಆದ ಶ್ರೀ ಆಚಾರ್ಯರನ್ನು, ಕಪೀಂದ್ರರಾದ ಶ್ರೀ ಹನುಮಂತದೇವರ ಕೃಪಾಮೃತದಿಂದ ಅಭಿಷಿಕ್ತರನ್ನಾಗಿ ತಿಳಿದರು. ಇಲ್ಲದಿದ್ದರೆ ಹಾಗೆ ಅದ್ಭುತವಾಗಿ ವರ್ಣನೆಯನ್ನು ಭೂಮಿಯಲ್ಲಿ ಯಾವ ನರನು ಮಾಡಲು ಸಮರ್ಥನಿದ್ದಾನೆ?

ಗೀತಾ ಭಾರತಸಂಗ್ರಹೇತಿ ಕಥಿತಾ ತಸ್ಯಾಶ್ಚ ವಕ್ತಾ ತಥಾ
ಕೋ ಯುಷ್ಮಾಸ್ವಿತಿ ಪೃಚ್ಛತಿ ಪ್ರಿಯಗುರೌ ಪ್ರಾದರ್ಶಿ ಯೇನೈತಯೋಃ ॥
ಪರ್ವಾಧ್ಯಾಯನವದ್ವಯಸ್ಯ ಚ ಮಿಥಃ ಸಮ್ಯಙ್ನವೀನಾನ್ವಯಃ
ತದ್ಗೀತಾಮೃತಪಾನಸ್ಸ್ವವಿಹಿತಾಸಕ್ತ್ಯಾರ್ಜುನೋಽಭೂಜ್ಜನಃ ॥ ೧೧೦ ॥

"ಶ್ರೀ ಮದ್ಭಗವದ್ಗೀತೆಯು ಮಹಾಭಾರತದ ಸಂಗ್ರಹವೆಂದು ಶ್ರೀಮದಾಚಾರ್ಯರೇ ಮೊದಲಾದ ಜ್ಞಾನಿಗಳು ತಿಳಿಸಿದ್ದಾರೆ. ನಿಮ್ಮಲ್ಲಿ ಯಾರು ಅದನ್ನು ಹಾಗೆ ಹೇಳುವರಿದ್ದೀರಿ?" ಎಂದು ನಗುತ್ತ ಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರು ಶಿಷ್ಯರಿಗೆ ಕೇಳಿದಾಗ ಶ್ರೀ ಆಚಾರ್ಯರು ಗೀತಾ ಭಾರತಗಳ ಪ್ರತಿಪರ್ವ ಅಧ್ಯಾಯಗಳಿಗೆ (೧೮ ಪರ್ವಕ್ಕೆ ೧೮ ಅಧ್ಯಾಯಗಳಿಗೆ) ಪರಸ್ಪರವಾಗಿ ಸೊಗಸಾದ ಹೊಸತರಹದ ಸಮನ್ವಯವನ್ನು ತೋರಿಸಿದ್ದರು. ಹೀಗೆ ಅದ್ಭುತವಾದ ಆ ಆಚಾರ್ಯರ ಗೀತಾಮೃತವನ್ನು ಪಾನಮಾಡುವುದರಿಂದ ಹಾಗೂ ಅದರ ಫಲವಾಗಿ ಸ್ವವಿಹಿತ ವರ್ಣಾಶ್ರಮಾಚಾರದಲ್ಲಿ ಆಸಕ್ತಿ ಹೊಂದುವುದರಿಂದ ಜನರು ಅರ್ಜುನನಂತೆ ತೋರುತ್ತಿದ್ದರು.

ಶೃಣ್ವನ್ ಶ್ರೀಹರಿವಂಶವಿಷ್ಣುಮುಖಸನ್ನಾನಾಪುರಾಣಾದಿಕಂ
ಆಚಾರ್ಯೇಣ ಚ ವರ್ಣಿತಂ ಜನಗಣಃ ಪ್ರಾಪ್ತೇ ಸಮಾಪ್ತೇರ್ದಿನೇ ॥
ಶ್ವೋ ನೈವಂ ಭವಿತೇತಿ ಚಿಂತನಯುತೋ ಮ್ಲಾನೋಽಪಿ ತಾವದ್ದಿನೇ
ಲಬ್ಧ್ವಾ ಸಾಧು ಭವೌಷಧಂ ಭುವಿ ಬಭೌ ಸಾಕ್ಷಾತ್ಪರೀಕ್ಷಿನ್ನಿಭಃ ॥ ೧೧೧ ॥

ಶ್ರೀ ಆಚಾರ್ಯರು ವರ್ಣಿಸಿದ, ಶ್ರೀ ಹರಿವಂಶ, ವಿಷ್ಣು ಪುರಾಣ ಮೊದಲಾದ ಸಾತ್ವಿಕ ಪುರಾಣಗಳನ್ನು ಶ್ರವಣ ಮಾಡಿದ ಜನ ಸಮುದಾಯವು ಮಂಗಳ ಮಹೋತ್ಸವದ ದಿನ ಪ್ರಾಪ್ತವಾದಾಗ 'ನಾಳೆ ಹೀಗೆ ಇಲ್ಲವಲ್ಲ' ಎಂದು ಆಲೋಚಿಸುತ್ತ ಬಾಡಿ ಹೋಗುತ್ತಿದ್ದರೂ, ಅಷ್ಟು ದಿನಗಳಲ್ಲಿಯೇ ಸಂಸಾರಕ್ಕೆ ಔಷಧವಾದ ಪ್ರವಚನವನ್ನು ಚೆನ್ನಾಗಿ ಸಂಗ್ರಹಿಸಿ ಸಾಕ್ಷಾತ್ ಪರೀಕ್ಷಿತನಂತೆ ಸಾಧನೋನ್ಮುಖವಾಗಿ ವಿರಾಜಿಸುತ್ತಿತ್ತು.

ದಿವ್ಯೇ ಭವ್ಯದರುಕ್ಮಿಣೀಶವಿಜಯೇ ಕಾವ್ಯೇಽಥ ತದ್ವರ್ಣಿತೇ
ಸದ್ವಾತಾಗಮಪೋಷಿತಾಂ ಸುಕವಿತಾಂ ದೃಷ್ಟ್ವೋತ್ತಮಾಂ ಸೂತ್ರಿಣೀಮ್ ॥
ನಿರ್ವಾತಾಗಮತಃ ಕೃಶಾಂ ಕುಕವಿತಾಂ ನಿಸ್ಸೂತ್ರಿಣೀಂ ಸ್ವೈರಿಣೀಂ
ದುಷ್ಕಾಂಕ್ಷಾವಿಷಯೋಷಿದಂ ಪರಭವಾಂ ಜ್ಞಾತ್ವಾ ಜನೋಽದ್ರಾವಯತ್ ॥ ೧೧೨ ॥

ದಿವ್ಯವೂ ಮಂಗಳ ಪ್ರದವೂ ಆದ ಶ್ರೀ ರುಕ್ಮಿಣೀಶವಿಜಯವೆಂಬ ಕಾವ್ಯವನ್ನು ಶ್ರೀ ಆಚಾರ್ಯರು ವರ್ಣಿಸಿದಾಗ, ಜನರು ಒಳ್ಳೆಯ ವಾಯುವಿನ (ಮಧ್ವಶಾಸ್ತ್ರದ) ಆಗಮನದಿಂದ ಪುಷ್ಟಳಾದ, ಬ್ರಹ್ಮಸೂತ್ರವೆಂಬ ಮಂಗಳ ಸೂತ್ರವುಳ್ಳ ಉತ್ತಮ ಕವಿತೆಯೆಂಬ ಸ್ತ್ರೀಯನ್ನು ನೋಡಿದ್ದರು. ಆಗ ವಾಯುವಿನ ಆಗಮನ (ಮಧ್ವಶಾಸ್ತ್ರ) ವಿಲ್ಲದೇ ಮೃತಪ್ರಾಯಳಾಗಿ ಸೊರಗಿರುವ, ಸೂತ್ರಸಂಬಂಧವಿಲ್ಲದೇ, ಸ್ವೇಚ್ಛಾಚಾರಿಯಾದ ಪರವಾದಿಗಳ ಕೆಟ್ಟ ಕವಿತೆಯನ್ನು ದುಷ್ಟ ಬಯಕೆಗಳೆಂಬ ವಿಷದಕನ್ಯೆಯೆಂದು ತಿಳಿದು ದೂರಕ್ಕೆ ಓಡಿಸಿಬಿಟ್ಟರು.

ಸರ್ವೇಷಾಮುಪಕಾರಿಣಂ ಹರಿಕಥಾಪೀಯೂಷಸಾರಾಭಿಧಂ
ದಾಸಾಧೀಶಜನಿಂ ದ್ವಿಜಃ ಕೃತಿಮಣಿಂ ಗಾಯಂಶ್ಚ ಸಂವರ್ಣಯನ್ ॥
ಸತ್ತತ್ವಾನಿ ಸುಬೋಧಯನ್ ಸುಜನತಾಂ ಸಂತೋಷಯನ್ ದರ್ಶಯನ್
ದಾಸವ್ಯಾಸವಚಸ್ಸು ಸ ಸ್ವಪಟುತಾಂ ಶ್ರೀಸವ್ಯಸಾಚೀಯತೇ ॥ ೧೧೩ ॥

ಸಕಲ ಅಧಿಕಾರಿಗಳಿಗೆ ಉಪಕಾರಕವಾದ ಶ್ರೀಹರಿಕಥಾಮೃತಸಾರವೆಂಬ ಶ್ರೀ ಜಗನ್ನಾಥದಾಸವರ್ಯರಿಂದ ಆವಿರ್ಭಾವ ತಾಳಿದ ಗ್ರಂಥರತ್ನವನ್ನು ಆ ಬ್ರಾಹ್ಮಣರಾದ ಶ್ರೀನಿವಾಸಾಚಾರ್ಯರು ಹಾಡುತ್ತ, ಸುಂದರವಾಗಿ ವರ್ಣಿಸುತ್ತ, ಶ್ರೇಷ್ಠ ಪ್ರಮೇಯಗಳನ್ನು

ತಿಳಿಸುತ್ತ, ಸಜ್ಜನರಿಗೆ ಸಂತೋಷನೀಡುತ್ತ, ದಾಸಸಾಹಿತ್ಯ ವ್ಯಾಸಸಾಹಿತ್ಯ ಇವೆರಡರಲ್ಲಿ ತಮ್ಮ ಅದ್ಭುತ ಚಾತುರ್ಯವನ್ನು ತೋರಿಸುತ್ತಿದ್ದರೆ ಶ್ರೀ ಸವ್ಯಸಾಚಿಯಂತೇ ಆಗಿದ್ದರು.

ಯಾ ಭೂಕಂಪನಿಭಾ ಕುವೆಂಪುಕಪಿಪದುರ್ವಾದವೃಕ್ಷೋತ್ಪಾಟನೇ
ಯಾ ಬೇಂದ್ರೇಪ್ರಮುಖಾನ್ ಚಕಾರ ವಿಮುಖಾನರ್ಕೋ ಯಥಾ ಚಾತಕಾನ್ ॥
ಯಾ ದ್ವೈತಾರಿದಿವಾಕರಾದಿನುತಗೋಸ್ವಾಚ್ಛಾದನೇಽರಿಪ್ರಭಾ
ಭಾಷಾಪಂಚಕಕಾಂಚನಾಂಚಿತರುಚಾ ಸಾಽಽಚಾರ್ಯವಾಗರ್ಚ್ಯತೇ ॥ ೧೧೪ ॥

ಯಾವುದು ಕುವೆಂಪು ಎಂಬ ಕಪಿ (ಕವಿ)ಯ ನೆಲೆಯಾದ ಕೆಟ್ಟ ಮಾತೆಂಬ ಮರವನ್ನು ಉರುಳಿಸುವಲ್ಲಿ ಭೂಕಂಪದಂತೆ ಇತ್ತೋ, ಯಾವುದು ದ.ರಾ.ಬೇಂದ್ರೇ ಮೊದಲಾದ ಪ್ರಮುಖ ವ್ಯಕ್ತಿಗಳನ್ನು, ಸೂರ್ಯನು ಚಾತಕವನ್ನೆಂಬಂತೆ ವಿಮುಖ (ಮಾತಿಲ್ಲದವ) ರನ್ನಾಗಿಸಿತೊ, ಹಾಗೆಯೇ ಯಾವುದು ದ್ವೈತಕ್ಕೆ (ಜಯದ್ರಥನ ಸೀಳುವುದಕ್ಕೆ) ವಿರುದ್ಧವಾದ ದಿವಾಕರನೇ ಮೊದಲಾದವರ ಮಾತೆಂಬ ಪ್ರಕಾಶವನ್ನು ಮುಚ್ಚಿ ತಡೆಯುವಲ್ಲಿ ಶ್ರೀ ಕೃಷ್ಣ ಚಕ್ರದಂತೆ ಶೋಭಿಸುತ್ತಿತ್ತೋ, ಅಂತಹ ಐದು (ಕನ್ನಡ ಮರಾಠೀ ಹಿಂದೀ ಉರ್ದು ಸಂಸ್ಕೃತ) ಭಾಷೆಗಳೆಂಬ ಬಂಗಾರದ ಕಾಂತಿಯಿಂದ ಕೂಡಿದ ಆಚಾರ್ಯರ ವಾಣಿಯನ್ನು (ನಾನು) ಅರ್ಚಿಸುತ್ತೇನೆ.

ಶ್ರುತ್ವಾ ಯನ್ನದಗರ್ಜಿತಸ್ಯ ಶಿಖಿನೋ ಭೂತ್ವಾ ಬಭುರ್ಭೂಸುರಾಃ
ಯೋಷಾ ವೈದಿಕವೇಷಭೂಷಣಪಣಾ ಯದ್ಭಾಷಯಾ ಚಾಽಶುಭನ್ ॥
ಫುಲ್ಲಂ ಬಾಲಕಲೋಲಲೋಕಕಮಲಂ ಯಸ್ಮಾತ್ ಕೃತಂ ಲೀಲಯಾ
ತಸ್ಯಾಚಾರ್ಯವರಸ್ಯ ಚ ಪ್ರವಚನಂ ಕಿಂ ವಾ ಸ್ತುವೇಽಹಂ ಜಡಃ ॥ ೧೧೫ ॥

ಯಾವ ಆಚಾರ್ಯರ ಗುಡುಗುವ ಧ್ವನಿಯನ್ನು ಕೇಳಿದಾಗ ಭೂಸುರರು ಶಿಖಿಗಳಾಗಿ (ನವಿಲುಗಳಾಗಿ-ಶಿಖಾಧರಿಸಿದವರಾಗಿ) ನಲಿದಾಡಿದರೋ, ಯಾವ ಆಚಾರ್ಯರ ಮಾತಿನಿಂದ ಸ್ತ್ರೀಯರು ವೈದಿಕ ವೇಷಭೂಷಣಗಳ ಪಣತೊಟ್ಟು ಶೋಭಿಸಿದರೋ, ಯಾವ ಆಚಾರ್ಯರಿಂದ ಬಾಲಕರ ಚಂಚಲ ಕಂಗಳೆಂಬ ಕಮಲಗಳು ಸುಲಭವಾಗಿ ಅರಳಿದವೋ, ಅಂತಹ ಶ್ರೀ ಆಚಾರ್ಯವರ್ಯರಾದ ಶ್ರೀನಿವಾಸಾಚಾರ್ಯರ ಪ್ರವಚನವನ್ನು ದಡ್ಡನಾದ ನಾನು ಎಷ್ಟು ಸ್ತುತಿಸೇನು ?

ಆರ್ಯಸ್ಯೇದೃಶಸುಂದರಪ್ರವಚಸೋ ಮಾಹಾತ್ಮ್ಯಮತ್ಯದ್ಭುತಂ
ನೂನಂ ತದ್ಧರಿಭಕ್ತಿಮಾತ್ರಸುಫಲಂ ಪಾಂಡಿತ್ಯತೋ ನೋತ್ಥಿತಮ್ ॥
ಸ್ವಸ್ಮಿನ್ ಯಸ್ಯ ಚ ನಾಸ್ತಿ ಭಕ್ತಿರಜಿತೇ ಕಿಂ ಶಕ್ನುತೇಽಯಂ ನರಃ
ಸಾ]ಽನ್ಯೇಷಾಂ ಹರಿಭಕ್ತಿದಪ್ರವಚನಂ ಕರ್ತುಂ ಧರಿತ್ರ್ಯಾಮಹೋ ॥ ೧೧೬ ॥

ಶ್ರೀ ಆಚಾರ್ಯರ ಇಂತಹ ಸುಂದರವಾದ ಪ್ರವಚನದ ಈ ಅತ್ಯದ್ಭುತ ಮಹಾತ್ಮ್ಯಕ್ಕೆ ಆ ಆಚಾರ್ಯರ ನಿರ್ಮಲ ಹರಿಭಕ್ತಿಯೊಂದೇ ಕಾರಣ. ಅದು ಪಾಂಡಿತ್ಯದಿಂದ ಉಂಟಾದದ್ದು ಅಲ್ಲ. ಏಕೆಂದರೆ - ಯಾವ ವ್ಯಕ್ತಿಗೆ ತನ್ನಲ್ಲಿ ಮೊದಲು ಹರಿಭಕ್ತಿ ಇರುವುದಿಲ್ಲವೋ, ಅಂಥವನು ಮತ್ತೊಬ್ಬರಿಗೆ ಹರಿಭಕ್ತಿಯನ್ನು ಧಾರೆಯೆರೆಯುವ ಪ್ರವಚನಮಾಡಲು ಭೂಮಂಡಲದಲ್ಲಿ ಸಾಧ್ಯವಿದೆಯೇ?

ವಾಕ್ಯಾರ್ಥಗ್ರಂಥರತ್ನಪ್ರಣಯನವಿನಯಾಲಂಕೃತಚ್ಛಾತ್ರಯೂಥ -
ಭಕ್ತ್ಯುದ್ರೇಕಪ್ರದಾಯಿಪ್ರವಚನವಿಧಯಾ ಸುಪ್ರಸಿದ್ಧಶ್ಚತುರ್ಧಾ ॥
ಧೀರಸ್ಯಾಯಂ ವಿಚಾರಃ ಪರಮತಹರಣೇ ಹರ್ಷಣೇ ಸಜ್ಜನಾನಾಂ
ತ್ರಯ್ಯಾಸ್ಸಂಸೇವನೇ ಗೋಶ್ಚತುರಕರ ಇವ ಭ್ರಾಜತೇ ಶ್ರೀಮುರಾರೇಃ ॥ ೧೧೭ ॥

ವಾಕ್ಯಾರ್ಥ, ಗ್ರಂಥಗಳ ರಚನೆ, ವಿನಯ ಭೂಷಿತರಾದ ಶಿಷ್ಯವರ್ಗ, ಭಕ್ತಿಯನ್ನು ಉಕ್ಕೇರಿಸುವ ಪ್ರವಚನ, ಹೀಗೆ ನಾಲ್ಕು ವಿಧವಾಗಿ ಸುಪ್ರಸಿದ್ಧವಾಗಿರುವ ಧೀರರಾದ ಶ್ರೀ ಆಚಾರ್ಯರ ಈ ವಿಚಾರಧಾರೆ - ಪರಮತಗಳನ್ನು ನಿವಾರಣೆಮಾಡುವುದರಲ್ಲಿ, ಸಜ್ಜನರಿಗೆ ಸಂತೋಷ ನೀಡುವುದರಲ್ಲಿ ಹಾಗು ವೇದಗಳ ವಾಕ್ಯಗಳೆಂಬ ಗೋವಿನ ಸೇವೆ ಮಾಡುವುದರಲ್ಲಿ ಮುರಾರಿಯಾದ ಶ್ರೀ ಕೃಷ್ಣಪರಮಾತ್ಮನ ಚತುರವಾದ ನಾಲ್ಕು ಕೈಗಳಂತೆ ವಿರಾಜಿಸುತ್ತಿದೆ.

ಮುಕ್ತೀಶೇ ತಸ್ಯ ಭಕ್ತಿಂ ದೃಢತರಮಧುರಾಂ ವಚ್ಮಿ ಕಿಂ ಯದ್ಬಲೇನ
ತಸ್ಯಾಸೀಜ್ಜನ್ಮ ಶುದ್ಧಪ್ರಚುರಮತಿಮತಾಸಕ್ತವಿದ್ವತ್ಸುವಂಶೇ ॥
ಧೀರಃ ಶ್ರೀಸಾತ್ವಿಕಾರ್ಯೋ ಹರಿಗುರುನಿರತಃ ಶುದ್ಧಿದಾತಾ ಪಿತಾಽಭೂತ್
ಮಾತಾ ಸದ್ವಂಶಜಾತಾ ಶುಭದಯಯಮುನಾ ವೃದ್ಧಿದಾ ಬುದ್ಧಿದಾಽಭೂತ್ ॥ ೧೧೮ ॥

ಆ ಆಚಾರ್ಯರ ಸುದೃಢವೂ ಸುಂದರವೂ ಆದ ಮುಕುಂದನಲ್ಲಿದ್ದ ಭಕ್ತಿಯನ್ನು ಏನೆಂದು ಬಣ್ಣಿಸಲಿ! ಆ ಭಕ್ತಿಯ ಬಲದಿಂದ ಶ್ರೀ ಆಚಾರ್ಯರಿಗೆ ಶುದ್ಧವಾದ, ಮಧ್ವಮತದಲ್ಲಿ ಬದ್ಧರಾದ ವಿದ್ವಾಂಸರ ವಂಶದಲ್ಲಿ ಜನ್ಮ ದೊರಕಿತ್ತು. ಧೀರರಾದ ಹಾಗು ಹರಿಗುರುಗಳ ಭಕ್ತರಾದ ಶ್ರೀ ಸಾತ್ವಿಕ ಆಚಾರ್ಯರು ಶುದ್ಧಿ ಪ್ರದರಾದ ತಂದೆಗಳೆನಿಸಿದರು. ಸದ್ವಂಶಜಾತರಾದ ಒಳ್ಳೆಯ ಕಾರುಣ್ಯವುಳ್ಳ ಯಮುನಾಬಾಯಿಯವರು ಅಭಿವೃದ್ಧಿ ಹಾಗು ಬುದ್ಧಿಗಳನ್ನು ನೀಡುವ ತಾಯಿಯಾಗಿದ್ದರು. (ಇವೆಲ್ಲವೂ ಭಕ್ತಿಯ ಪ್ರಭಾವವೆಂದು ಭಾವ).

ಲಬ್ಧಃ ಸದ್ಧ್ಯಾನತೀರ್ಥಾಭಿಧವಿಬುಧಪತಿಃ ಶುದ್ಧಕಾರುಣ್ಯಮೂರ್ತಿಃ
ವಿಶ್ರಾಂತೋದಂತಕೀರ್ತಿರ್ನವವಿಪುಲಮತಿರ್ನಾಶಿತಸ್ವಾಶ್ರಿತಾರ್ತಿಃ ॥

ವಿಷ್ವಗ್ವಿದ್ಯಾಪ್ರದೀಪ್ತಿರ್ಗುರುರಪಿ ಜಯದಾಶೀರ್ದಸದ್ವಾಗ್ವಿಭೂತಿಃ
ಆರ್ಯೇಣಾನೇನ ಭಕ್ತಿದ್ರುಮಫಲಕಮಲಾನಾಥಕಾರುಣ್ಯತೋ ಹಿ ॥ ೧೧೯ ॥

ಶ್ರೀ ಸತ್ಯಧ್ಯಾನತೀರ್ಥರು ವಿದ್ವಚ್ಚಕ್ರವರ್ತಿಗಳು. ನಿರ್ಮಲ ಕಾರುಣ್ಯದ ಮೂರ್ತಿಗಳು. ಪ್ರಸಿದ್ಧವಾದ ವಿಸ್ತಾರವಾದ ಕೀರ್ತಿಸಂಪನ್ನರು. ಅಭಿನವ ಆನಂದತೀರ್ಥರು. ಆಶ್ರಯಿಸಿದವರ ಕಷ್ಟಗಳನ್ನು ಪರಿಹರಿಸುವರು. ಎಲ್ಲೆಡೆ ಹರಡಿರುವ ವಿದ್ಯಾಕಾಂತಿಯುಳ್ಳವರು. ಇಂತಹ ಶ್ರೀಸತ್ಯಧ್ಯಾನತೀರ್ಥರು ವಿಜಯವಾಗಲೆಂದು ಆಶೀರ್ವಾದದ ಮಾತುಗಳೆಂಬ ಐಶ್ವರ್ಯಭರಿತರಾದ ಉಪದೇಶಕರಾಗಿ ದೊರಕಿದ್ದೂ ಸಹ ಭಕ್ತಿಯೆಂಬ ಮರಕ್ಕೆ ಫಲವಾಗಿರುವ ಲಕ್ಷ್ಮೀಪತಿಯಾದ ಶ್ರೀಹರಿಯ ಕರುಣೆಯಿಂದಲೇ.

ದುಷ್ಟಾನಾಂ ದೃಷ್ಟಿಕಷ್ಟಂ ಹರಿಪದರತಿಮಚ್ಛಿಷ್ಟನೄಣಾಂ ಸದೇಷ್ಟಂ
ಕಾಯಾಯಾಸಂ ಸುಶರ್ಮಪ್ರದಮಪಿ ಮನಸಃ ಶ್ರೀಶಸೇವಾದಿರೂಪಮ್ ॥
ತಚ್ಚಾರ್ವಾಚಾರಭಾರಂ ಪ್ರಚುರಮತಿಮತಂ ಶ್ರದ್ಧಯಾನುವ್ರಜಂತೀ
ಪತ್ನೀಪುತ್ರಾದಿಸಂಪತ್ ಹರಿರತಿಜಹರಿಪ್ರೀತಿಜಾತಾ ಹಿ ತಸ್ಯ ॥ ೧೨೦ ॥

ದುಷ್ಟರ ದೃಷ್ಟಿಗಳಿಗೆ ಅದು ಕಷ್ಟವಾದದ್ದು. ಆದರೆ ಭಗವತ್ಪಾದಾವಲಂಬಿಗಳಾದ ಶಿಷ್ಟ ಜನರಿಗೆ ಸದಾ ಇಷ್ಟವಾದದ್ದು. ದೇಹಕ್ಕೆ ಆಯಾಸವಾಗುವುದಾದರೂ ಮನಸ್ಸಿಗೆ ಆನಂದ ನೀಡುವಂತಹದ್ದು. ಇಂತಹ, ಶ್ರೀ ಹರಿವಾಯುಗಳ ಸೇವಾರೂಪವಾದ ಶ್ರೀ ಆಚಾರ್ಯರ ಮನೋಹರವಾದ ಆ ಜಪತಪಾದಿ ಆಚಾರವನ್ನು ಹಾಗೂ ಶ್ರೀಮದಾಚಾರ್ಯರ ಸಿದ್ಧಾಂತವನ್ನು ಶ್ರದ್ಧೆಯಿಂದ ಅನುಸರಿಸುವ ಹೆಂಡತಿ ಮಕ್ಕಳು ಮೊದಲಾದ ಈ ಭಾಗ್ಯವು ಶ್ರೀ ಆಚಾರ್ಯರಿಗೆ ಆ ಹರಿಭಕ್ತಿಯಿಂದ ಹುಟ್ಟಿದ ಶ್ರೀಹರಿಪ್ರಸಾದದಿಂದ ಆವಿರ್ಭಾವವದ್ದೇ ಸರಿ.

ವಿದ್ಯಾವಿದ್ಯಾಪ್ರದಾನಪ್ರವಚನಕವಿತಾಘೋರವಾಕ್ಯಾರ್ಥಚರ್ಚಾ -
ವಾದಪ್ರೌಢಪ್ರಬಂಧಪ್ರಣಯನಹರಿಸದ್ದಾಸವಾಗ್ಗಾನರೂಪಃ ॥
ನಾನಾಕಾರೋ ವಿಚಾರಃ ಪರತಿಮಿರಹರೋ ಧೀರಮಾಧ್ವೋಕ್ತಿಚಾರಃ
ಭಕ್ತ್ಯಾ ಫಲ್ಯಪ್ಯಯಂ ತದ್ಧರಿಗುರುಚರಣಾಂಭೋಜಭಕ್ತೇಃ ಫಲಂ ಹಿ ॥ ೧೨೧ ॥

ಅಧ್ಯಯನ - ಅಧ್ಯಾಪನ - ಪ್ರವಚನ - ಕವನ - ಘೋರವಾದ ವಾಕ್ಯಾರ್ಥ ಕದನ - ಪ್ರೌಢವಾದ ವಾದಗ್ರಂಥಗಳ ನಿರ್ಮಾಣ - ಶ್ರೀ ಹರಿದಾಸರ ಪದಗಳ ಗಾಯನ ಹೀಗೆ ಅನೇಕ ಆಕಾರಗಳನ್ನು ತಾಳಿರುವ , ಪರಮತಗಳೆಂಬ ಕತ್ತಲೆಯನ್ನು ಕಳೆಯುವ, ಧೀರಮಾಧ್ವರ ಮಾತುಗಳ ಗೂಢಚಾರನಂತಿರುವ ಈ ಆಚಾರ್ಯರ ವಿಚಾರವು, ಭಕ್ತಿಯಿಂದ ಫಲೀ (ಹಣ್ಣುಳ್ಳ ಮರ) ಎಂದಾಗುವುದಾದರೂ (ಅಂದರೆ ಇದಕ್ಕೆ ಭಕ್ತಿಯೇ ಫಲವೆನಿಸಿದ್ದರೂ) ಇದು ಆ ಹರಿವಾಯುಗುರುಗಳ ಪಾದ ಕಮಲದ ಭಕ್ತಿಯ ಫಲವೇ ಆಗಿದೆ.

ತೀರ್ಥಕ್ಷೇತ್ರಾದಿಯಾತ್ರಾಫಲಮಪಿ ಸಕಲಂ ಜಾನಕಂ ನೈವ ಮೇ ಸ್ಯಾತ್
ದುರ್ವಾದಾರಿಪ್ರದಾರಿಪ್ರಥಿತಕೃತಿತತಿರ್ದಕ್ಷಿಣಾಸ್ಯಾದ್ಗುರೂಣಾಮ್ ॥
ಇತ್ಥಂ ತದ್ಭಾವನಾವಾನ್ ಹರಿಗುರುಚರಣೇ ಯಾದೃಶೀಂ ಭಕ್ತಿಮಾಪ್ನೋತ್
ಏವಂ ವಕ್ತುಂ ನ ವಕ್ತ್ರಂ ಪ್ರಭವತಿ ಮಮ ಕಿಂ ತ್ವಂ ಚ ಮೇ ಸ್ಯಾತ್ಸಮಾನಃ ॥೧೨೨ ॥

ತೀರ್ಥಕ್ಷೇತ್ರಾದಿ ಯಾತ್ರೆಗಳ ಎಲ್ಲ ಫಲವು ಜನ್ಮನೀಡಿದ ತಂದೆತಾಯಿಗಳಿಗೆ ಸೇರುತ್ತದೆಯೇ ಹೊರತು ನನ್ನದಲ್ಲ. ಹಾಗೆಯೇ ದುರ್ವಾದಗಳೆಂಬ ಶತ್ರುಗಳನ್ನು ಸೀಳುವ ಪ್ರಖ್ಯಾತವಾದ ಗ್ರಂಥಗಳೆಲ್ಲವೂ ಗುರುಗಳಿಗೆ ದಕ್ಷಿಣೆಯೇ ಹೊರತು ನನ್ನದಲ್ಲ. ಹೀಗೆ ಶ್ರೇಷ್ಠ ಭಾವನೆಯುಳ್ಳ ಶ್ರೀ ಆಚಾರ್ಯರು ಹರಿಗುರುಗಳ ಪಾದಗಳಲ್ಲಿ ಎಂತಹ ಭಕ್ತಿ ಹೊಂದಿದ್ದರೆಂದು ವರ್ಣಿಸಲು ನನ್ನ ವದನವು ಸಮರ್ಥವಾಗಿಲ್ಲವಷ್ಟೇ ಅಲ್ಲ, (ಹೇ ವಾಚಕನೇ) ಈ ವಿಷಯದಲ್ಲಿ ನೀನೂ ಸಹ ನನಗೆ ಸಮಾನನೇ ಸರಿ.

ನಿರ್ಯಾತೋ ಬ್ರಹ್ಮರಂಧ್ರಾತ್ ವಿಬುಧಗಣಮಣೇಸ್ಸಾತ್ವಿಕಾರ್ಯಸ್ಯ ಸೂನುಃ
ಧ್ಯಾತ್ವಾ ತೀರ್ಥೇಶ್ವರಶ್ರೀಪತಿಮಥ ಸುತನುಂ ತ್ಯಕ್ತವತ್ಯಾ ಜನನ್ಯಾಃ ॥
ದೇಹಂ ತ್ಯಕ್ತ್ವಾಪ ದೇವಂ ವಸನವದಿತಿ ತದ್ಭಕ್ತಿಶಕ್ತಿಂ ವ್ಯನಕ್ತಿ
ನೃಣಾಮಂತೇ ಹಿ ಭಕ್ತಿರ್ಭವತಿ ಯದಿ ಸದಾ ಭಕ್ತಿರೀಶೇ ವಿಶುದ್ಧಾ ॥ ೧೨೩॥

ಬ್ರಹ್ಮರಂಧ್ರದಿಂದ ನಿರ್ಯಾಣ ಮಾಡಿದ, ಪಂಡಿತ ಮಂಡಲಿಯಲ್ಲಿ ರತ್ನದಂತೆ ಇರುವ ಶ್ರೀ ಸಾತ್ವಿಕಾಚಾರ್ಯರೇ ದೇಹ ನೀಡಿದ ತಂದೆಗಳು. ಹಾಗೆಯೇ ತೀರ್ಥಕ್ಷೇತ್ರಗಳ ಅಧಿಪತಿಯಾದ ಪರಮಾತ್ಮನ ಅವತಾರಗಳನ್ನು ಧ್ಯಾನಿಸುತ್ತ ಶರೀರವನ್ನು ತ್ಯಜಿಸಿದಂತಹ ಯಮುನಾಂಬೆಯೇ ದೇಹ ನೀಡಿದ ತಾಯಿ. ಹೀಗೆ ಸಾಧನೆಗೈದ ತಂದೆತಾಯಿಗಳ ಪುತ್ರರಾದ ಶ್ರೀ ಆಚಾರ್ಯರು ಶರೀರವನ್ನು ವಸ್ತ್ರವನ್ನು ತೆಗೆದು ಬಿಸಡುವಂತೆ ತ್ಯಜಿಸಿ ಶ್ರೀ ಹರಿಯ ಸಾನ್ನಿಧ್ಯವನ್ನು ಹೊಂದಿದರೆಂಬ ವಿಷಯವು ಅವರ ಭಕ್ತಿಯ ಶಕ್ತಿ ಎಷ್ಟಿತ್ತೆಂಬುದನ್ನು ಅಭಿವ್ಯಕ್ತಿ ಮಾಡುತ್ತದೆ. ಏಕೆಂದರೆ : - ನಿರ್ಮಲವಾದ ಭಗದ್ಭಕ್ತಿಯನ್ನು ನಿತ್ಯ ಹೊಂದಿದ್ದರೆ ಮಾತ್ರ ಮನುಷ್ಯರಿಗೆ ಅಂತ್ಯಕಾಲದಲ್ಲಿ ಹರಿಭಕ್ತಿಯುಂಟಾಗುತ್ತದೆಯಷ್ಟೆ.

ಆಯಾಂತಂ ವೇಂಕಟೇಶಂ ತಿರುಪತಿಪುರತೋ ವೀಕ್ಷಮಾಣಸ್ತುವಾನಃ
ಸ್ವೋಪಾಸ್ಯಾಶ್ವಾಸ್ಯಪೂಜಾಕೃದಮಲದಿವಸೇ ದಿವ್ಯಗೀತಾಜಯಂತ್ಯಾಮ್ ॥
ಏಕಾದಶ್ಯಾಂ ತ್ಯಜನ್ ಸ ಸ್ವತನುಮಥ ಗತೋ ವ್ಯಾಸದೇವಸ್ಯ ವಾಸಂ
ರೇಜೇ ಧನ್ಯಾಗ್ರಗಣ್ಯಃ ಸುಮಹಿತಚರಿತಃ ಸಚ್ಛ್ರುತಃ ಶ್ರೀನಿವಾಸಃ ॥ ೧೨೪ ॥

ಶ್ರೀ ಆಚಾರ್ಯರು ತಿರುಪತಿ ಪುರದಿಂದ ಆಗಮಿಸಿರುವ ವೆಂಕಟಪತಿಯನ್ನು ನೋಡುತ್ತ ಕೊಂಡಾಡುತ್ತ, ತಮ್ಮ ಉಪಾಸ್ಯನಾದ ಹಯಗ್ರೀವದೇವರ ಪೂಜೆಯನ್ನು ಮಾಡಿದವರಾಗಿ, ಆ ಹಯಗ್ರೀವದೇವರ ಪೂಜೆಯನ್ನು ಮಾಡಿದ್ದ ಶ್ರೀ ಸತ್ಯನಾಥತೀರ್ಥರ ಆರಾಧನಾ ದಿನವಾದ ಹಾಗೂ ದಿವ್ಯವಾದ ಗೀತಾಜಯಂತಿಯ ದಿನವಾದ ಮಾರ್ಗಶೀರ್ಷಶುದ್ಧ ಏಕಾದಶೀ ತಿಥಿಯಲ್ಲಿ ತಮ್ಮ ಶರೀರವನ್ನು ಇಹ ಲೋಕದಲ್ಲಿ ತ್ಯಜಿಸಿ, ವೇದವ್ಯಾಸದೇವರ ಆವಾಸವಾದ ಬದರೀ ಕ್ಷೇತ್ರಕ್ಕೆ ಸಂಚರಿಸಿ, ಧನ್ಯರಲ್ಲಿ ಅಗ್ರಗಣ್ಯರಾಗಿ ಸಜ್ಜನರಿಂದ ಆಶ್ರಿತರಾಗಿ, ಸಜ್ಜನರಿಂದ ಸ್ತುತ್ಯವಾದ ಚರಿತ್ರೆಯುಳ್ಳವರಾಗಿ ವಿರಾಜಮಾನರಾದರು.

**ನಮಸ್ತೇ ಪ್ರಾಣೇಶಪ್ರಿಯಕುಲಜನೇ ಸಾತ್ವಿಕಸುತ**
**ನಮಸ್ತೇ ಧ್ಯಾನಾರ್ಯಪ್ರಿಯಜಯದವಾಕ್ಯಾರ್ಯಲಸಿತ ॥**
**ನಮಸ್ತೇ ವಿಧ್ವಸ್ತಾಖಿಲಕುಮತ ಮಾಧ್ವಾಗಮರತ**
**ನಮಃ ಶ್ರೀವಾಸಾರ್ಯ ಪ್ರದಿಶ ಸುದೃಶಂ ಸಾಧುಮಹಿತ** ॥ ೧೨೫ ॥

ಮುಖ್ಯ ಪ್ರಾಣದೇವರ ಪ್ರೀತಿಪಾತ್ರ ವಂಶದಲ್ಲಿ ಜನಿಸಿದ ಹೇ ಸಾತ್ವಿಕ ಆಚಾರ್ಯರ ಪುತ್ರರೇ ನಿಮಗೆ ನಮನಗಳು. ಶ್ರೀಸತ್ಯಧ್ಯಾನತೀರ್ಥರಿಗೆ ಪ್ರಿಯವಾದ, ಹಾಗೂ ಜಯಪ್ರದವಾದ ವಾಗ್ವ್ಯಾಪಾರದಿಂದ, ಹಾಗೂ ಆಚಾರ ಅನುಷ್ಠಾನಗಳಿಂದ ಕಂಗೊಳಿಸುವ ಹೇ ಆಚಾರ್ಯರೇ ನಿಮಗೆ ನಮನಗಳು. ಎಲ್ಲ ಕುಮತಗಳನ್ನು ಖಂಡಿಸಿ ಮಧ್ವಸಿದ್ಧಾಂತದಲ್ಲಿ ನಿರತರಾದ ಹೇ ಆಚಾರ್ಯರೇ! ನಿಮಗೆ ನಮನಗಳು. ಸಜ್ಜನರಿಂದ ಪೂಜಿತರಾದ ಶ್ರೀನಿವಾಸಾಚಾರ್ಯರೇ ನಿಮಗೆ ನಮನಗಳು. ನಮಗೆ ಒಳ್ಳೆಯ ಜ್ಞಾನವನ್ನು ದಯಪಾಲಿಸಿ.

**ಇತಿ ನಿಗದಿತವಂತಃ ಸರ್ವಭೂದೈವತೇಂದ್ರಾಃ**
**ಗುರುವರಪದಸಕ್ತಾಃ ಭಕ್ತಿಪೀಯೂಷಸಿಕ್ತಾಃ ॥**
**ಹೃದಿ ಧೃತಗುರುರೂಪಾ ನೇಮುರೇನಂ ವಿಪಾಪಾಃ**
**ಹರಿಗುರುದಯಿತಾಗ್ರ್ಯಂ ಶ್ರೀನಿವಾಸಾಭಿಧಾರ್ಯಮ್** ॥ ೧೨೬ ॥

ಹೀಗೆ ನುಡಿಯುತ್ತ ಎಲ್ಲ ಬ್ರಾಹ್ಮಣೋತ್ತಮರು ಶ್ರೀ ಗುರುವರ್ಯರ ಪದಗಳಲ್ಲಿ ಆಸಕ್ತರಾಗಿ, ಭಕ್ತಿಯೆಂಬ ಅಮೃತದಿಂದ ಅಭಿಷಿಕ್ತರಾದವರಾಗಿ, ಗುರುಗಳ ಸ್ವರೂಪವನ್ನು ಹೃದಯದಲ್ಲಿ ಧರಿಸಿದವರಾಗಿ, ಪಾಪ ಶೂನ್ಯರಾಗಿ ಶ್ರೀ ಹರಿಗುರುಗಳಿಗೆ ಅತಿಪ್ರಿಯರಾದ ಶ್ರೀನಿವಾಸಾಚಾರ್ಯರನ್ನು ನಮಸ್ಕರಿಸಿದರು.

**ಕುವಾಕ್ಪಂಕಾನರ್ಥಕ್ಷಯದಸುಖತೀರ್ಥಾನ್ವಯಜನೇಃ**
**ಪಿತುಶ್ಶಾಸ್ತ್ರಛಾತ್ರಪ್ರವಚನಕೃತೋ ಭಕ್ತಿಸುಧಯಾ ॥**
**ವಿಚಾರಶ್ರೀವಾಚಾ ರುಚಿರರಚಿತಾಚಾರ್ಯಶತಕ -**
**ತ್ರಯೇ ವ್ಯಾಸಸ್ಯಾಂತ್ಯಂ ಭವತು ಹೃದಯಾತ್ಯಂತರುಚಿರಮ್** ॥ ೧೨೭ ॥*

ದುರ್ವಾದವೆಂಬುವ ಕೆಸರಿನಿಂದಾಗುವ ಅನರ್ಥಗಳನ್ನು ನಾಶಗಳಿಸುವ ಶ್ರೀ ಸುಖತೀರ್ಥರ ಸುಖಕರವಾದ ಶಾಸ್ತ್ರವೆಂಬುವ ನೀರನ್ನು ಹೊಂದಿರುವ 'ತೀರ್ಥಾಚಾರ್ಯ' ಎಂಬುವ ವಂಶದಲ್ಲಿ ಜನಿಸಿದಂತಹ, ಭಕ್ತಿಯೆಂಬುವ ಅಮೃತದಿಂದ ಶ್ರೇಷ್ಠ ಗ್ರಂಥಗಳು ಶಿಷ್ಯರು ಹಾಗು ಪ್ರವಚನ ಇವುಗಳ ನಿರ್ಮಾಣಗೈಯುವ ಪೂಜ್ಯ ತಂದೆಗಳ ವಿಚಾರಸಂಪತ್ತಿನ ವಾಕ್ಯಗಳಿಂದ ರುಚಿರನು ರಚಿಸಿದ ಈ ಆಚಾರ್ಯಶತಕತ್ರಯದಲ್ಲಿ ಅಂತಿಮವಾದ ವಿಚಾರಶತಕವು ಶ್ರೀ ವೇದವ್ಯಾಸದೇವರ ಹೃದಯಕ್ಕೆ ಅತ್ಯಂತರುಚಿರವಾಗಲಿ.

## ಇತಿ ರುಚಿರಾಚಾರ್ಯನಾಮಕೇನ ಬಾಲಕೇನ

### ರಚಿತೇ ಆಚಾರ್ಯಶತಕತ್ರಯೇ

### ತೃತೀಯಂ ವಿಚಾರಶತಕಮ್

ಕೃಷ್ಣಾರ್ಪಣಮಸ್ತು



# शोधपत्रिका

| पुट - | श्लोकः | अशुद्धं | शुद्धं |
|---|---|---|---|
| 6 - | २० | लत्स | लसत्स |
| 7 - | २५ | रत्न | रत्न |
| 7 - | २७ | विष्णुसंश्रितौ | विष्णुपदसंश्रितौ |
| 8 - | २८ | पल्या | पत्न्या |
| 8 - | २९ | भगवक्ति | भगवद्भक्ति |
| 14 - | ५९ | ताशुम् | तांशुम् |
| 17 - | ७७ | पठे | मठे |
| 18 - | ८२ | पुटं | पटुं |
| 20 - | ९४ | जेत्ता | जेता |
| 21 - | ९७ | यशास्त | यशस्त |
| 21 - | ९८ | पूणैः | पूर्णैः |
| 26 - | १२२ | कारोभिध | काराभिध |
| 27 - | ३ | गृह्वात् | गृह्णात् |
| 28 - | १० | कोशेय | कौशेय |
| 28 - | १० | विद्वकृति | विद्वत्कृति |
| 31 - | २७ | ष्येनं | ष्यैनं |
| 31 - | २८ | नूत्नोऽयेष | नूत्नोऽप्येष |
| 31 - | २९ | नार्क | नवार्क |
| 36 - | ६७ | यान्ति | यन्ति |
| 36 - | ७० | अन्त | अनन्त |
| 38 - | ८५ | पद्म | पद्मा |
| 38 - | ९१ | तद्ध | तद्द |

| पुट - | श्लोक | अशुद्ध | शुद्ध |
|---|---|---|---|
| 39 - | ९३ | नन्व | तन्व |
| 41 - | १०६ | श्रृण्व | श्रुण्व |
| 41 - | १०८ | लस्तौ | लस्तौ |
| 41 - | १०९ | हृद्द्योयोप | हृद्द्योप |
| 43 - | ११२ | भूसर | भूसुर |
| 43 - | ११२ | प्रचार्यो | प्राचार्यो |
| 45 - | १ | लङ्कृत | लङ्कृत |
| 45 - | ३ | सोल्लास | सो लास |
| 46 - | ६ | प्रवरा | प्रवर |
| 46 - | ६ | द्विरदर | द्विरददर |
| 50 - | २६ | रत्नं | रत्नं |
| 54 - | ३९ | दीघा - | दीर्घा |
| 58 - | ५३ | नूत्ना - | नूत्ना |
| 62 - | ७७ | वामनानम् | वामनानाम् |
| 63 - | ८५ | निलयापदो | निलयपदो |
| 64 - | ९२ | तद्धिक्षा | तद्दीक्षा |
| 65 - | ९९ | प्रदद्वि | प्रदः |
| 66 - | १०३ | स्थितत्व | स्थिततत्त्व |
| 66 - | १०४ | समुद्धत | समुद्धृत |
| 66 - | १०४ | नव्योद्धतं | नव्योद्धृतं |
| 69 - | ११५ | भुसुराः | भूसुराः |



# ಆಚಾರ್ಯಶತಕತ್ರಯಮ್

ಇತ್ತೀಚಿನ ದಶಕಗಳಲ್ಲಿ ನಿರ್ಮಾಣಗೊಂಡಿರುವ ಒಂದು ವಿನೂತನ ಸಂಸ್ಕೃತ ಕಾವ್ಯ ಗ್ರಂಥವೇ ಆಚಾರ್ಯಶತಕತ್ರಯಮ್. ಈ ಕಾವ್ಯವು ನಾನಾವಿಧ ಛಂದಸ್ಸು - ಅಲಂಕಾರ - ರಸಗಳಿಂದ ಹಾಗೂ ಚೇತೋಹಾರಿಯಾದ ಪದಗಳ ವಿನ್ಯಾಸದಿಂದ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ.

ಈ ಕಾವ್ಯದಲ್ಲಿ ಲೋಕವಿಶ್ರುತರಾದ ಪರಮಪೂಜ್ಯ ಪಂಡಿತರಾಜ ಶ್ರೀ ಜಾಲೀಹಾಳ ಶ್ರೀನಿವಾಸಾಚಾರ್ಯರು ಕಥಾನಾಯಕರು. ಪೂಜ್ಯ ಆಚಾರ್ಯರ ಭವ್ಯ ಚರಿತ್ರೆಯನ್ನು ಕಥೆ - ಆಚಾರ - ವಿಚಾರ ಎಂದು ಮೂರು ವಿಧವಾಗಿ ವಿಂಗಡಿಸಿ ವರ್ಣಿಸುವ ವಿನೂತನ ವಿಧಾನವನ್ನು ಇಲ್ಲಿ ಅಳವಡಿಸಲಾಗಿದೆ. ಗೃಹಸ್ಥ ಆಶ್ರಮದಲ್ಲಿ ಸಾಧನೆಗೈದ ಮಹನೀಯರೊಬ್ಬರನ್ನು ವರ್ಣಿಸುವ ಹಾಗೂ ಪ್ರಕಾಶನಗೊಳ್ಳುತ್ತಿರುವ ಪ್ರಥಮಕಾವ್ಯವೆಂಬುದು ಇದರ ಹೆಗ್ಗಳಿಕೆ.

ಶ್ರೀ ಪೂಜ್ಯ ಆಚಾರ್ಯರ ದೌಹಿತ್ರರಾದ ಹಾಗೂ ಬಾಳಗಾರು ಶ್ರೀನಿವಾಸಾಚಾರ್ಯರ ಜ್ಯೇಷ್ಠಪುತ್ರರಾದ ಶ್ರೀ ರುಚಿರಾಚಾರ್ಯರು ಈ ಕಾವ್ಯದ ಕವಿಗಳು. ಈ ಕಾವ್ಯವನ್ನು ತಮ್ಮ ೧೮ನೇ ವರ್ಷದಲ್ಲಿಯೇ ನಿರ್ಮಿಸಿ ಮಾತಾಪಿತೃಗಳಿಗೆ ಅರ್ಪಿಸಿದ ಈ ಕವಿಗಳೇ ಇದರ ವಿಶೇಷ ಸ್ವಾರಸ್ಯವನ್ನು ತಿಳಿಪಡಿಸಲು ಸಂಸ್ಕೃತ ಲಘು ಟಿಪ್ಪಣಿಯನ್ನು ಹಾಗೂ ಕನ್ನಡದಲ್ಲಿ ಭಾವಾನುವಾದವನ್ನು ರಚಿಸಿರುತ್ತಾರೆ. ಈ ಕೃತಿಯು ಶ್ರೀ ಆಚಾರ್ಯ ವಿದ್ಯಾಧಿಷ್ಠಾನದ ಪ್ರಥಮ ಕಾಣಿಕೆಯಾಗಿದೆ.

